

ಚರಿತ್ರೆಯಲ್ಲಿ ಮಹಿಳೆಯರು ಕಳೆದುಹೋಗಿರುವುದೂ ಮಹಿಳೆಯರ ಚರಿತ್ರೆ ಕಳೆದುಹೋಗಿರುವುದೂ ಎಲ್ಲಾ ಕಾಲದ ಸತ್ಯ. ಯಾವುದರ ಚರಿತ್ರೆಯನ್ನಾದರೂ ನೋಡಿ. ಚರಿತ್ರೆ ಅನ್ನುವುದು ಏನಿದ್ದರೂ History ಅಂದರೆ History - 'ಅವನ' ಕಥೆ ಮಾತ್ರ. ಆದರೆ ಚರಿತ್ರೆಯನ್ನು ಮತ್ತೆ ರೂಪಿಸುವ, ಮತ್ತೆ ನಿರೂಪಿಸುವ ಕಾರ್ಯ ಆರಂಭವಾಗಿದೆ.

ಕನ್ನಡ ರಂಗಭೂಮಿಯ ಅನನ್ಯ ಪ್ರತಿಭೆ ಆರ್.ನಾಗರತ್ನಮ್ಮ ಅವರನ್ನು ಕುರಿತ ಈ ಪುಸ್ತಕ ಅವರ ಜೀವನದ ಕಥನವೂ ಹೌದು. ಆ ಕಾಲದ ಸಾಮಾಜಿಕ-ಸಾಂಸ್ಕೃತಿಕ ಸ್ಥಿತಿಗತಿಗೆ ಹಿಡಿದ ಕನ್ನಡಿಯೂ ಹೌದು. ರಂಗಭೂಮಿಯಂಥ ಸಂಕೀರ್ಣ ಕ್ಷೇತ್ರದಲ್ಲಿ ಎಲ್ಲ ರೀತಿಯ ಅಡೆತಡೆಗಳನ್ನು ದಾಟಿಕೊಂಡು ಕಾಲದ ಹಾದಿಯಲ್ಲಿ ಹೆಜ್ಜೆ ಗುರುತು ಮೂಡಿಸಿದ ಸಾಹಸಿ ಕಲಾವಿದೆಯೊಬ್ಬರ ಈ ಕಥೆ, ಹೆಣ್ಣಿನ ಅದಮ್ಯ ಚೇತನಕ್ಕೆ ಸಂಕೇತವಾಗಿದೆ.

ಭಾಗ್ಯಲಕ್ಷ್ಮಿ ಪದಕಿ ಅವರ ಆಕರ್ಷಕ ಶೈಲಿಯ ನಿರೂಪಣೆ ನಾಗರತ್ನಮ್ಮ ಅವರ ಜೀವನದ ಸಮಸ್ತ ಸಾಧನೆಗಳನ್ನೂ ಪ್ರಖರ ಬೆಳಕಿನಲ್ಲಿ ರಂಗ ಮಧ್ಯಕ್ಕೆ ತಂದು ನಿಲ್ಲಿಸಿದೆ. ಈ ವಿಶಿಷ್ಟ ಕೃತಿಗಾಗಿ ನಾಗರತ್ನಮ್ಮ ಅವರಿಗೆ ಅಭಿವಂದನೆ, ಭಾಗ್ಯಲಕ್ಷ್ಮಿ ಅವರಿಗೆ ಅಭಿನಂದನೆ.

– **ಡಾ. ಆರ್. ಪೂರ್ಣಿಮಾ**
ಸಂಪಾದಕರು, ಉದಯವಾಣಿ



ಲೇಖಕಿ :
**ಭಾಗ್ಯಲಕ್ಷ್ಮಿ ಪದಕಿ**




ಜೀವನವೆಂಬುದು ನಾಟಕವಲ್ಲ... ಇದೇ ಬೇರೆ ಆಟ

ಕನ್ನಡ ಭಾರತಿ ೫೦




ಶ್ರೀಮತಿ ಆರ್. ನಾಗರತ್ನಮ್ಮನವರ ಜೀವನ ಕಥಾನಕ

# ಜೀವನವೆಂಬುದು ನಾಟಕವಲ್ಲ... ಇದೇ ಬೇರೆ ಆಟ!

**ಭಾಗ್ಯಲಕ್ಷ್ಮಿ ಪದಕಿ**



ಸಿವಿಜಿ ಪಬ್ಲಿಕೇಷನ್
ಬೆಂಗಳೂರು

## ಭಾಗ್ಯಲಕ್ಷ್ಮಿ ಪದಕಿ

ಕನ್ನಡ- ಮನಶಾಸ್ತ್ರ- ಪತ್ರಿಕೋದ್ಯಮ ವಿಷಯಗಳೊಂದಿಗೆ ಬಿ.ಎ. 'ಸಮೂಹ ಮಾಧ್ಯಮ'ದಲ್ಲಿ ಎಂ.ಎಸ್. ಪದವಿ ಪಡೆದಿರುವ ಭಾಗ್ಯಲಕ್ಷ್ಮಿಯವರದು ಬಹುಮುಖ ಪ್ರತಿಭೆ.

ಕವನ- ಲೇಖನ- ಪತ್ರಿಕಾಬರಹ- ಆಕಾಶವಾಣಿ ದೂರದರ್ಶನಗಳಲ್ಲಿ ಸಂದರ್ಶನ ಭಾಷಣ ಭಾಷಾಂತರ ಇವೆಲ್ಲದರಲ್ಲೂ ತೊಡಗಿಕೊಂಡಿರುವವರು.

ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಕಟಿಸಿರುವ 'ಅನ್ನ ಮಾಚಾರ್ಯ' ಕೃತಿಯನ್ನು ಭಾಗ್ಯಲಕ್ಷ್ಮಿ ಕನ್ನಡಕ್ಕೆ ಅನುವಾದಿಸಿದ್ದಾರೆ.

'ಉಷಾ ಕಿರಣ' ದೈನಿಕ ಪತ್ರಿಕೆಯ ಉಪ- ಸಂಪಾದಕರಾಗಿದ್ದ ಇವರು ಇದೀಗ ಶೇಷಾದ್ರಿಪುರಂ ಕಾಲೇಜಿನಲ್ಲಿ ಸಂವಹನ ವಿಭಾಗದ ಮುಖ್ಯಸ್ಥ ಉಪನ್ಯಾಸಕಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ.

"ನಿಲ್ಲು ನಿಲ್ಲಲೆ ನವಿಲೆ ನಿನ್ನ ಕಣ್ಣುಗಳೇಸು
ಕಣ್ಣು ಬಣ್ಣಗಳೇಸು ಎಣಿಸಲಾರೆ!
ಎಲ್ಲ ರೂಪಿಸಿದವನು ಎಲ್ಲಿ ತಾನಡಗಿದನೆ
ತಾಳಲಾರದು ಜೀವ ಹೇಳಬಾರೆ"

- ಮಧುರ ಚೆನ್ನ



# ಜೀವನವೆಂಬುದು ನಾಟಕವಲ್ಲ, ಇದೇ ಬೇರೆ ಆಟ

ಕನ್ನಡದ ಹಿರಿಯ ರಂಗ ಕಲಾವಿದೆ,
ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪುರಸ್ಕೃತೆ,
ಗುಬ್ಬಿ ವೀರಣ್ಣ ಪ್ರಶಸ್ತಿ ವಿಜೇತೆ

## ಶ್ರೀಮತಿ ಆರ್.ನಾಗರತ್ನಮ್ಮನವರ

ಜೀವನ ವೃತ್ತಾಂತ.

ಲೇಖಕಿ
ಭಾಗ್ಯಲಕ್ಷ್ಮಿ ಪದಕಿ

ನೆರವು
ಕೆ.ಹೆಚ್. ನರಸಿಂಹ ಮೂರ್ತಿ

ಸಿವಿಜಿ ಪಬ್ಲಿಕೇಷನ್ಸ್
ಬೆಂಗಳೂರು



**JEEVANAVEMBUDHU NATAKAVALLA, IDHE BERE AATA** (Life is not a Drama, it is a different Game)
Life Story of Country's eminent theatre personality
Smt. R. Nagarathnamma
By
**Bhagya lakshmi Padaki**
Mob: 9845196594

Published by
**CVG Publications**
No. 70, 2nd Main Road
Jabbar Block, Vyalikaval
Bengaluru - 560 003



First Impression : 2009
Price : **Rs.125 /-**
Pages : XXII + 182+16 Photos = 220
Paper Used : 80 GSM Maplitho
Book Size : 1/8th Demmy

D.T.P. by
**Chandragiri Graphics**
Bengaluru.
Cover Page Designed by: **K.N. Sudharshana**

Printed At
**Shakthi Printers & Publishers**
No. 277, 5th Cross
Vidhana Soudha Extn. Laggere
Bengaluru -560 058
Tel: +91 80 28370797, Fax: +91 80 28370825.



"ಕನ್ನಡ ನುಡಿ ನಮ್ಮ ಹೆಣ್ಣು,
ನಮ್ಮ ತೋಟದಿನಿಯ ಹಣ್ಣು,
ಬಳಿಕ ಬೇರೆ ಬೆಳೆದ ಹೆಣ್ಣು
ಬಳಿಗೆ ಸುಳಿದಳು
ಹೊಸದು ರಸದ ಬಳ್ಳಿ ಹಣ್ಣ
ಒಳಗೆ ಸುಳಿದಳು"
- ಬಿ. ಎಂ. ಶ್ರೀ.

**ಸಂಪಾದಕರು**
ಡಾ. ಎಚ್.ಎಲ್. ಪುಷ್ಪ
ಗಿರಿಜಾ ಚಂದ್ರು

**ಸಂಚಾಲಕರು**
ಸಿವಿಜಿ ಚಂದ್ರು

# ಸಂಪಾದಕರ ಮಾತು

'ಕನ್ನಡ ಭಾರತಿ - ೫೦' ಸಿವಿಜಿ ಪಬ್ಲಿಕೇಷನ್ಸ್‌ರವರ ಎರಡನೆಯ ಗಮನಾರ್ಹ ಮಾಲಿಕೆ. ೨೯.೧೦.೨೦೦೪ರಂದು ಕುವೆಂಪು ಜನ್ಮಶತಮಾನೋತ್ಸವದ ಸಂದರ್ಭದಲ್ಲಿ ಕರ್ನಾಟಕದ ವಿವಿಧ ಲೇಖಕರು ಬರೆದ ನೂರಾ ಹತ್ತು ಕೃತಿಗಳನ್ನು ಏಕಕಾಲದಲ್ಲಿ ಬಿಡುಗಡೆ ಮಾಡಿದ್ದು ಕುವೆಂಪುರವರಿಗೆ ಸಲ್ಲಿಸಿದ ಮರೆಯಲಾಗದ ಗೌರವವಾಗಿತ್ತು. ಈಗ ಅಂಥದೇ ಮತ್ತೊಂದು ಸಾಹಸಕ್ಕೆ ಸಿವಿಜಿ ಪಬ್ಲಿಕೇಷನ್ಸ್ ಕೈ ಹಾಕಿದ್ದು ಕರ್ನಾಟಕದ ಐವತ್ತು ಲೇಖಕಿಯರ ಕೃತಿಗಳನ್ನು 'ಕನ್ನಡ ಭಾರತಿ-೫೦'ರ ಮಾಲಿಕೆಯಲ್ಲಿ ಹೊರತರುತ್ತಿದೆ, ಸುವರ್ಣ ಕರ್ನಾಟಕದ ಸಂಭ್ರಮವನ್ನು ತನ್ನದೇ ಆದ ರೀತಿಯಲ್ಲಿ ಆಚರಿಸುತ್ತಿದೆ.ಕ

ಈ ಐವತ್ತು ವರ್ಷಗಳಲ್ಲಿ ಕರ್ನಾಟಕ ನಾಡು, ನುಡಿ, ಸಂಸ್ಕೃತಿಯನ್ನು ಕುರಿತಂತೆ ಹಲವಾರು ರೀತಿಯ ಅವಸ್ಥಾಂತರಗಳಿಗೆ ಒಳಗಾಗಿದ್ದು ತನ್ನತನವನ್ನು ಕಾಪಾಡಿಕೊಂಡು ಬಂದಿದೆ. ಕನ್ನಡವನ್ನು, ಕನ್ನಡತನವನ್ನು ಕಟ್ಟುವ, ಬೆಳೆಸುವ ಕೆಚ್ಚಿನ ಕನಸು ಕನ್ನಡಿಗರನ್ನು ಕಾಪಾಡಿಕೊಂಡು ಬಂದಿದೆ. ಈ ದೀರ್ಘ ಅವಧಿಯಲ್ಲಿ ಕನ್ನಡನಾಡಿನ ಸಾಹಿತ್ಯ ಹಲವು ರೀತಿಯ ಬದಲಾವಣೆ, ಪ್ರಯೋಗಗಳನ್ನು ಕಂಡಿದೆ. ರಾಷ್ಟ್ರಮಟ್ಟದಲ್ಲಿ ತನ್ನ ಅನನ್ಯತೆಯನ್ನು ಕಂಡುಕೊಂಡಿದೆ. ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಲೇಖಕಿಯರ ಹೆಜ್ಜೆಗಳೂ ಸಹ ಸ್ಪಷ್ಟವಾಗಿ ಗುರ್ತಿಸಲ್ಪಟ್ಟಿವೆ. ತನ್ನತನವನ್ನು ಸಾಹಿತ್ಯದಲ್ಲಿ ಮೂಡಿಸಿದ ಲೇಖಕಿ ಪ್ರತ್ಯೇಕ ಮಾನದಂಡಗಳಿಂದಾಚೆ ಸತ್ವಯುತ ಅಭಿವ್ಯಕ್ತಿಯೆಡೆಗೆ ಗಮನಕೊಟ್ಟಿದ್ದಾಳೆ. ಸೃಜನೇತರ ಪ್ರಕಾರಗಳಾದ ಸಂಶೋಧನೆ, ವಿಮರ್ಶೆ, ಮಾನವಿಕ, ಅಂಕಣಬರಹಗಳು, ಅನುವಾದ, ಪ್ರವಾಸಸಾಹಿತ್ಯ ಪ್ರಕಾರಗಳನ್ನು ಸಹ ಗಂಭೀರವಾಗಿ ಪರಿಗಣಿಸಿದ್ದಾಳೆ. ಈ ಮಾಲಿಕೆಯ ವಿಶೇಷವೆಂದರೆ ಪದ್ಯ ಪ್ರಕಾರಕ್ಕಿಂತ ಗದ್ಯಪ್ರಕಾರದಲ್ಲಿ ಹೆಚ್ಚು ಪ್ರಕಟಗೊಳ್ಳುತ್ತಿರುವುದು. ಅದರಲ್ಲೂ ಅಂಕಣ ಬರಹಗಳ ಸಂಗ್ರಹಗಳು ವಿಶೇಷವಾಗಿ ಪ್ರಕಟಗೊಳ್ಳುತ್ತಿವೆ. ಈ ಮಾಲಿಕೆಯಲ್ಲಿ ನಾಡಿನ ಹಿರಿಯ ಲೇಖಕಿಯರನ್ನೂ ಒಳಗೊಂಡಂತೆ ಇತ್ತೀಚಿನ ಲೇಖಕಿಯರ ಮೊದಲ ಕೃತಿಗಳು ಸಹ ಸೇರಿವೆ.

ಇಂದಿನ ಸಾಹಿತ್ಯ ಸಂದರ್ಭ ಹಿಂದಿನ ಸಾಹಿತ್ಯ ಸಂದರ್ಭಗಳಿಗಿಂತ ಭಿನ್ನವಾಗಿದ್ದು, ವಿಶೇಷವಾಗಿ ಹುಡುಕಾಟ ಅಥವಾ ಹೊಸ ಪ್ರಯೋಗಗಳಲ್ಲಿ ತನ್ನನ್ನು ತೊಡಗಿಸಿಕೊಂಡಿದೆ. ಅದರಲ್ಲೂ

## ಬವಣೆಯ ಬಾಲ್ಯದಲ್ಲೇ ಅಂಟಿಕೊಂಡ ಬಣ್ಣದ ನಂಟು!

'ಪ್ರತಿಭೆ ಹಾಗೂ ಬಡತನ ಇವು ಅವಳಿ- ಜವಳಿ, ಕವಿ - ಕಲಾವಿದರಿಗೆ ಹುಟ್ಟುತ್ತಲೇ ಬರುವ ಬಳುವಳಿ' ಎಂಬ ಮಾತೊಂದಿದೆ. ಕನ್ನಡ ಕವಿ, ಕಲಾವಿದರ ಪಾಲಿಗಂತೂ ಇದು ಸತ್ಯಸ್ಯ ಸತ್ಯ. ನನ್ನ ಹಣೆಬರಹವೂ ಬೇರೆಯೇನಲ್ಲ. ನಾನು ಹುಟ್ಟಿದ್ದೂ ಒಂದು ಬಡ ಕುಟುಂಬದಲ್ಲಿಯೇ. ಆದರೆ ರಾಜಮಹಾರಾಜರ ವೈಭವದ ರಾಜಧಾನಿ ಮೈಸೂರು ನಗರದಲ್ಲಿ! ದಿನಾಂಕ ೨೧ ನೇ ಜೂನ್ ೧೯೩೬ರಂದು. ತಾತನ ಊರು ಟಿ. ನರಸೀಪುರ. ನಮ್ಮದು ಸಂಪ್ರದಾಯಸ್ಥ ಬ್ರಾಹ್ಮಣ ಐಯ್ಯರ್ ಮನೆತನ.

ತಂದೆ ಕೃಷ್ಣಪ್ಪ, ತಾಯಿ ರುಕ್ಮಿಣಮ್ಮನಿಗೆ ಐವರು ಮಕ್ಕಳು. ನಾನೇ ಮನೆಗೆ ಹಿರಿಮಗಳು. ನನಗೆ ಮೂವರು ತಂಗಿಯರು: ಸುಂದರಮ್ಮ, ಶಾಂತಮ್ಮ ಮತ್ತು ಮಂಜುಳ. ಒಬ್ಬನೇ ತಮ್ಮ ಪರಮಶಿವನ್. ಕಾರಣಾಂತರದಿಂದ ಇಡೀ ಸಂಸಾರದ ಪೋಷಣೆಯ ಹೊಣೆ ನಮ್ಮ ತಾಯಿಯ ಹೆಗಲಿಗೇ ಬಿದ್ದಿತ್ತು. ಆಕೆ ಸಂಗೀತ ಶಿಕ್ಷಕಿ. ಜೂನಿಯರ್ ಪರೀಕ್ಷೆ ಆಗಿತ್ತು. ಸಂಪಾದನೆಯೋ, ತಿಂಗಳಿಗೆ ಇಪ್ಪತ್ತು ರೂಪಾಯಿಯ ಆಚೆ- ಈಚೆ. ಅಷ್ಟರಲ್ಲೇ ನಮ್ಮೆಲ್ಲರನ್ನೂ ನೆಮ್ಮದಿಯಾಗಿ ಸಾಕಿ ಸಲಹುವ ಹಂಬಲ, ಸಾಹಸ. ಆ ಯತ್ನದಲ್ಲಿ ಸಾಕಷ್ಟು ಮಟ್ಟಿಗೆ ಸಫಲರೂ ಆಗಿದ್ದರು. ತಂದೆಯ ಸಂಪಾದನೆ ಏನೊಂದೂ ಇರಲಿಲ್ಲ.

ನಾನು ನಾಲ್ಕನೇ ತರಗತಿಯವರೆಗೆ ಓದಿದ್ದು ಜಯಲಕ್ಷ್ಮಮ್ಮಣ್ಣಿ ಶಾಲೆಯಲ್ಲಿ. ನನ್ನ ಸಹಪಾಠಿಗಳೆಲ್ಲ ಬಣ್ಣ - ಬಣ್ಣದ, ನುಣ್ಣನೆಯ ಉಣ್ಣೆ- ರೇಶಿಮೆ ಬಟ್ಟೆ ಧರಿಸಿಬರುತ್ತಿದ್ದರು. ನಮ್ಮ ಪಾಲಿಗೆ ಅವೆಲ್ಲ ಆಕಾಶದ ಮಲ್ಲಿಗೆ. ಅವರ ಜತೆಯಲ್ಲಿ ಕೂತು ಕಲಿಯಲು, ಕೂಡಿ ಆಡಲು ಏನೋ ಹಿಂಜರಿಕೆ- ಕೀಳರಿಮೆ. ಅಲ್ಲದೆ ನಮಗೆಲ್ಲ ಇನ್ನೂ ಹಲವು ತೊಂದರೆ- ತಾಪತ್ರಯಗಳು. ಹೀಗಾಗಿ, ಜಯಲಕ್ಷ್ಮಮ್ಮಣ್ಣಿ ಶಾಲೆ ಬಿಟ್ಟು, ಅನಾಥಾಲಯ ಸ್ಕೂಲ್ ಸೇರಿದೆ. ಹಾಗೂ ಹೀಗೂ ಏಳನೇ ತರಗತಿಯವರೆಗೂ ಆ ಶಾಲೆಯ ಮೆಟ್ಟಿಲು ಹತ್ತಿದೆ. ಅದರಿಂದ ಇಳಿದದ್ದು ನನ್ನ ಹನ್ನೆರಡನೇ ವಯಸ್ಸಿನಲ್ಲಿ.

ಆಲ್ಲಿಗೆ ನನ್ನ ಓದಿಗೆ ಮಂಗಳವಾಯಿತು. ಅಂದರೆ ಶಾಲಾಕಲಿಕೆಗೆ ಮಾತ್ರ. ನನ್ನ ಮುಂದಿನ

ಅಲ್ಲಿಗೆ ನನ್ನ ಓದಿಗೆ ಮಂಗಳವಾಯಿತು. ಅಂದರೆ ಶಾಲಾಕಲಿಕೆಗೆ ಮಾತ್ರ. ನನ್ನ ಮುಂದಿನ ಓದೆಲ್ಲಾ ಬೇರೆ ನೆಲೆಯಲ್ಲಿ ಮುಂದುವರಿಯಿತು, ಬದುಕಿನದ್ದುಕ್ಕೂ ಬೆಳೆದು ಬಂತು. ಅದೇ

ವಿಧಿ ತೋರಿದ ಹಾಗೂ ನಾನು ಬಯಸಿ- ಬಯಸಿ ಸೇರಿದ ರಂಗ- ಶಾಲೆ.

ಆ ಕಾಲದಲ್ಲಿ ಹೆಣ್ಣು ಮಕ್ಕಳು ನಾಟಕ ನೋಡುವುದಿರಲಿ, ಮನೆಯಾಚೆ ಓಡಾಡಲೂ, ಬೀದಿಯಲ್ಲಿ ಅಡ್ಡಾಡಲೂ ಹಲವು ಹತ್ತು ಅಡ್ಡಿ- ಆತಂಕ - ಆಕ್ಷೇಪ. ಆದರೇನು? ಮೊದಲಿನಿಂದಲೂ ನನಗೆ ನಾಟಕದ ಕಡೆ ಪ್ರಬಲ ಸೆಳೆತ. ಏಳೆಂಟು ವಯಸ್ಸಿನಿಂದಲೂ ಹೇಗಾದರೂ ಮಾಡಿ ನೆರೆಹೊರೆಯ ಹಿರಿಯರೊಂದಿಗೋ, ಎಳೆಯರೊಂದಿಗೋ, ಆಗ ನಡೆಯುತ್ತಿದ್ದ ಎಲ್ಲಾ ನಾಟಕಗಳಿಗೂ ಹೋಗುತ್ತಿದ್ದೆ. ಆಗ ಮೈಸೂರಿನಲ್ಲಿ ದೊಡ್ಡ - ದೊಡ್ಡ ಕಂಪನಿಗಳ ಮೊಕ್ಕಾಂ. ಪೌರಾಣಿಕ ನಾಟಕಗಳ ಮಹಾಪೂರ: ಚಾಮುಂಡೇಶ್ವರಿ ಕಂಪನಿಯ ರಾಜಸೂಯ ಯಾಗ, ಭೀಷ್ಮ ಪ್ರತಿಜ್ಞೆ, ವೀರ ಅಭಿಮನ್ಯು, ಭಕ್ತ ತುಕಾರಾಂ, ದಾನಶೂರ ಕರ್ಣ, ರುಕ್ಮಾಂಗದ, ಮಹಾಭಾರತ. ಅದೇ ರೀತಿ ಗುಬ್ಬಿ ಕಂಪನಿಯಲ್ಲಿ ಕೃಷ್ಣಗಾರುಡಿ, ಕುರುಕ್ಷೇತ್ರ, ಕೃಷ್ಣಲೀಲೆ- ಒಂದಕ್ಕಿಂತ ಒಂದು ಅದ್ದೂರಿಯ ನಾಟಕಗಳು. ಒಂದೊಂದೂ ಮನಕ್ಕೆ ಮುದ, ಕಣ್ಣು- ಕಿವಿಗಳಿಗೆ ಹಬ್ಬವುಂಟು ಮಾಡುವಂಥವು. ಸುಬ್ಬಯ್ಯ ನಾಯ್ಡು, ನಾಗೇಂದ್ರ ರಾಯರು, ಕರ್ಣನ ಪಾತ್ರದ ಕೊಟ್ಟೂರಪ್ಪ, ದುರ್ಯೋಧನ ಪಾತ್ರದ ಎಂ. ವಿ. ಶಿವಪ್ಪ ಇವರೆಲ್ಲಾ ಆಗ ಜನಮನವನ್ನು ಸೂರೆಗೊಂಡಿದ್ದರು.

ಅಂದಿನ ಕಾಲವಷ್ಟೆ ಅಲ್ಲ, ಎಲ್ಲ ಕಾಲದ ಶ್ರೇಷ್ಠ ನಟರನೇಕರು ನಮ್ಮ ಬೀದಿಯಲ್ಲೇ ಇದ್ದವರು. ಹುಣಸೂರು ಕೃಷ್ಣಮೂರ್ತಿ, ಡಿಕ್ಕಿ ಮಾಧವರಾಯರು, ಗುಬ್ಬಿ ವೀರಣ್ಣನವರು ಹೀಗೆ. ದಿನದಿನವೂ ಅವರನ್ನು ನೋಡಿ, ಮಾತಾಡಿಸುವ ಅಪೂರ್ವ ಅವಕಾಶವೇ ಈ ಆಕರ್ಷಣೆಗೆ ಕಾರಣವಿರಬೇಕು. ವಾರಿಗೆಯ ಹುಡುಗಿಯರೆಲ್ಲ ಕುಂಟೆಬಿಲ್ಲೆ, ಕಣ್ಣಾಮುಚ್ಚಾಲೆ, ಜೂಟಾಟ, ಕಳ್ಳ - ಪೊಲೀಸ್ ಆಟವಾಡುತ್ತಿದ್ದರು. ಇಲ್ಲವೇ ಹಾಡು - ಹಸೆ, ಹೆಣೆಗೆ- ಹೊಲಿಗೆಗಳಂಥಾ ಹವ್ಯಾಸದಲ್ಲಿರುತ್ತಿದ್ದರು. ನನಗದರಲ್ಲೆಲ್ಲಾ ಆಸಕ್ತಿ ಕಡಿಮೆ. ಅವರನ್ನೆಲ್ಲ ಕರೆಕರೆದು ಗುಂಪುಗೂಡಿಸಿ, ಪುಸಲಾಯಿಸಿ ನಾಟಕವಾಡುವ ನಾಟಕ ಕಟ್ಟುತ್ತಿದ್ದೆ, ಆಟ ಆಡಿಸುತ್ತಿದ್ದೆ. ದೊಡ್ಡ ತೊಟ್ಟಿ ಮನೆಗಳ ನಡು ಹಜಾರದಲ್ಲಿ ಒಂದೆರಡು ಬೆಂಚುಕೂಡಿಸಿ ಹಾಕುತ್ತಿದ್ದೆವು. ಆ ಕಡೆ, ಈ ಕಡೆಯ ದುಂಡು ಕಂಬಗಳಿಗೆ ಹಿಂಭಾಗಕ್ಕೆ ಬಣ್ಣದ ಸೀರೆ ತುಂಡು, ಮುಂಭಾಗದಲ್ಲಿ ಬಿಳಿ ಪಂಚೆಗಳನ್ನು ಸೇರಿಸಿ ಕಟ್ಟಿ, ಸೀನರಿ- ಪರದೆ ತಯಾರು ಮಾಡುತ್ತಿದ್ದೆವು. ನಂತರ ನಾಟಕ: ನಮ್ಮದೇ ಮಾತು, ಹಾಡು. ಅಟ್ಟಣೆಯ ಮೇಲೆ ಸ್ಟೂಲೋ, ಕುರ್ಚಿಯೋ ಹಾಕಿ ನಾನು ಠೀವಿಯಿಂದ ಕಾಲಮೇಲೆ ಕಾಲು ಹಾಕಿ ಕೂತು ಚಪ್ಪಾಳೆ ತಟ್ಟಿ 'ಯಾರಲ್ಲಿ?' ಎನ್ನುವುದು. ನನ್ನ ಗೆಳೆಯನೋ, ಗೆಳತಿಯೋ ಯಾರೋ ಒಬ್ಬರು ಮುಂದೆ ಬಂದು, 'ಏನಪ್ಪಣೆ? ಹೇಳೋಣವಾಗಲಿ' ಎನ್ನುವುದು. ನಾನು ನೋಡಿದ್ದ ಯಾವುದಾದರೂ



ನಾಟಕದ ಹಾಡೊಂದನ್ನು ಅದೇ ಮಟ್ಟಿನಲ್ಲಿ ಕೆಟ್ಟ ಕೆಟ್ಟದಾಗಿ ಹಾಡುವುದು. ಈ ನಡುವೆ ದೊಡ್ಡವರಾರಾದರೂ ಬಂದು ನೋಡಿ, ಗದರಿಕೊಂಡರೆ ಒಬ್ಬೊಬ್ಬರೊಂದೊಂದು ಕಡೆ ಓಡುವುದು. ನಮ್ಮ ನಮ್ಮ ಮನೆ ಸೇರಿಬಿಡುವುದು. ಶೆಟ್ಟಿಬಿಟ್ಟಲ್ಲೇ ಪಟ್ಟಣ ಎಂಬಂತೆ ನಮ್ಮ ನಾಟಕಕ್ಕೆ ಬಿಟ್ಟಲ್ಲಿಗೇ ಮಂಗಳವಾಗುತ್ತಿತ್ತು. ದೊಡ್ಡವರು ಏರುಗಂಟಲಲ್ಲಿ ಸಹಸ್ರನಾಮ ಮಾಡುತ್ತಿದ್ದರು. ಮುಂದಿನ ನಾಟಕ ಮತ್ತಾವಾಗಲೋ? ಇನ್ನಾರ ಮನೆಯಲ್ಲೋ?

ಅಂದಿನ ನಾಟಕಗಳಲ್ಲಿ ಹೆಣ್ಣುಗಳಂತೆ ಬಣ್ಣ ಹಾಕಿ- ಬಟ್ಟೆ ತೊಟ್ಟು ರಂಗದ ಮೇಲೆ ಕುಣಿತ ಮಾಡಿ, ಹಾವಭಾವ ತೋರುತ್ತಿದ್ದವರೆಲ್ಲಾ ಗಂಡಸರೇ. ಮಹಿಳಾ ಕಲಾವಿದರು ಇಲ್ಲವೇ ಇಲ್ಲವೆನ್ನುವಷ್ಟು ವಿರಳ. ಅಂಥ ಬೆರಳೆಣಿಕೆಯ ಅಪರೂಪದ ನಟಿ ಜಿ. ಸುಂದರಮ್ಮನವರು. ಕನ್ನಡ ರಂಗಭೂಮಿಯ ಉದ್ದಾಮ ಪುರುಷ, ಉತ್ತುಂಗ ವ್ಯಕ್ತಿ ಗುಬ್ಬಿ ವೀರಣ್ಣನವರ ಹೆಂಡತಿ. 'ದೇವಾಂಗನೆ' ಪಾತ್ರವನ್ನು ಅವರು ನಿರ್ವಹಿಸುತ್ತಿದ್ದ ವೈಖರಿ ಅದ್ಭುತ, ಅಪೂರ್ವ. ಅವರ ಅಭಿನಯವನ್ನು ನೋಡಿದಾಗೆಲ್ಲ ನನ್ನ ಮನದಾಳದಲ್ಲಿ ಏನೋ ಒಂದು ಆಸೆ, ಹಂಬಲ, ತುಡಿತ. 'ಅವರ ಹಾಗೇ ನಾನೂ ರಂಗ ಸೇರಬೇಕು, ಅವರಂತೆ ನಟಿಸಿ ಹೆಸರಾಗಬೇಕು' ಎಂದು. ಅಂತಹ ಸಕಾಲ- ಸದವಕಾಶದ ಕನಸಿನಲ್ಲಿಯೇ ಸದಾ ವಿಹರಿಸುತ್ತಿದ್ದೆ.

# ಮೊತ್ತ ಮೊದಲೇ ಮದುವಣಗಿತ್ತಿ!

ಆಗೆಲ್ಲ ಮೈಸೂರಿನಲ್ಲಿ ಪ್ರತಿದಿನ ನಾಟಕಗಳು. ರಾತ್ರಿ ಆರಂಭವಾಗಿ ಬೆಳಗಿನ ಜಾವ ೨-೩ ಘಂಟೆವರೆಗೆ ನಡೆಯುತ್ತಿದ್ದವು. ಎಲ್ಲ ಆಟಗಳಿಗೂ ನಾನು ಹೆಚ್ಚು ಕಮ್ಮಿ ಖಾಯಂ ಪ್ರೇಕ್ಷಕಿ. ಹಾಗೆಯೇ ಖಾಯಂ ಆಗಿ ದೊಡ್ಡವರಿಂದ ಏಟು, ಪೆಟ್ಟು ತಿನ್ನುತ್ತಿದ್ದೆ. ಮನೆಯಲ್ಲಿ ಎಲ್ಲಾ ಕೆಲಸ ಮುಗಿಸಿ ಹೊರಡುತ್ತಿದ್ದೆ. ಸಮಯಕ್ಕೆ ಮುನ್ನವೇ ರಂಗಮಂದಿರಕ್ಕೆ ಹೋಗುತ್ತಿದ್ದೆ. ನಾಟಕವಷ್ಟೇ ಅಲ್ಲದೆ, ಮೆಲ್ಲ ಮೆಲ್ಲನೆ ತೆರೆಯ ಹಿಂದಕ್ಕೆ ಜಾರಿಹೋಗಿ ಬಣ್ಣದ ಮನೆಯೊಳಗೆ ಆಸೆಕಣ್ಣುಗಳಿಂದ ಇಣುಕಿ- ಹಣಕಿ ಮಾಡುತ್ತಿದ್ದೆ. ಅಲ್ಲಿನ ತಾಲೀಮು- ತಯಾರಿ- ತಮಾಷೆಗಳನ್ನೆಲ್ಲಾ ನೋಡಿ ಖುಷಿ ಪಡುತ್ತಿದ್ದುದು ನನ್ನ ಚಾಳಿ.

ಒಂದು ದಿನ 'ಭಕ್ತ ತುಕಾರಾಂ' ಪ್ರದರ್ಶನ, ಮೈಸೂರು ಟೌನ್‌ಹಾಲ್‌ನಲ್ಲಿ. ಎಂದಿನಂತೆ ಗ್ರೀನ್ ರೂಂ ಒಳಗೆ ಸುಳಿವು ಸಿಗದ ಹಾಗೆ ನುಸುಳಿ ಹೋಗಿ ಸುಳಿದಾಡುತ್ತಿದ್ದೇನೆ. ಆಗ ಇದ್ದಕ್ಕಿದ್ದ ಹಾಗೆ ಒಂದು ಜೋರು ಧ್ವನಿ: "ಆ ಹುಡುಗೀನ ಇಲ್ಲಿ ಕರಕೊಂಡು ಬನ್ರೋ" ಅದು ನನ್ನನ್ನು ಕುರಿತು ಹೇಳಿದ್ದೋ ಎಂದು ತಿಳಿಯಲು ತಡವಾಗಲಿಲ್ಲ. ಏಕೋ - ಏನೋ- ಎಂತೋ ಎಂದು ಆತುರ- ಕಾತುರದಿಂದ ಕಣ್ಣು- ಕಣ್ಣು ಬಿಡುತ್ತಿದ್ದೆ. ಕ್ಷಣಾರ್ಧದಲ್ಲಿಯೇ ನನ್ನನ್ನು ಕಲಾವಿದ ಕೊಟ್ಟೂರಪ್ಪನವರ ಮುಂದೆ ನಿಲ್ಲಿಸಿ ಬಿಟ್ಟಿದ್ದರು, ಅವರ ಭಂಟರು. ಏನೊಂದೂ ಪೀಠಿಕೆಯಿಲ್ಲದೇ ಕೊಟ್ಟೂರಪ್ಪನವರು ಕಠೋರಾಜ್ಞೆ ಮಾಡಿದರು: "ನೋಡು ಇಂದಿನ ನಾಟಕದಲ್ಲಿ ಒಂದು ದೃಶ್ಯವಿದೆ. ವಯಸ್ಸಾದ ಮುದಿಯನೊಡನೆ ಚಿಕ್ಕ ಹುಡುಗಿಯೊಬ್ಬಳ ಮದುವೆ. ಆದರೆ ಆ ಮಾಮೂಲೀ 'ಬಾಲವಧು' ಇಂದು ಚಕ್ಕರ್ ಹಾಕಿದ್ದಾಳೆ. ಆದ್ದರಿಂದ ಅವಳ ಜಾಗ ತುಂಬಲು ನೀನು ರಂಗ ಮಂಟಪವೇರಬೇಕು".

ನನಗೆ ಹಿಗ್ಗೋ- ಹಿಗ್ಗು. ಕನಸಿನ ಕಜ್ಜಾಯ ಕಣ್ಮುಂದೆಯೇ, ಆಸೆಯ ದೋಸೆ ಅಂಗೈ ಮೇಲೇ, ಮನದ ಮಂಡಿಗೆ ಮೊಗದೆದುರೇ ಮೈ ತಾಳಿ ಮೂಡಿದೆ! ಹಿಂದೆ- ಮುಂದೆ ನೋಡದೆ, ಮರು ಮಾತಾಡದೇ, ಅಡೆ- ತಡೆಗೆ ಎಡೆ ಕೊಡದೇ, ಒಪ್ಪಿಕೊಂಡು ಬಿಟ್ಟೆ. ಸುಳಿವು - ಸೂಚನೆ ಸಿಕ್ಕೊಡನೆಯೇ ರಂಗಮಂಟಪದ ಹೊಸ್ತಿಲು ಹತ್ತಿದೆ. ಹಸೆಮಣೆಯನ್ನೇರಿದೆ.



ಮದುವೆಯೂ ಆದೆ, ಅದೂ ಮುದುಕನೊಡನೆ. ಮನೆಗೆ ಬಂದ ಮೇಲೂ ಮತ್ತೊಂದು ರೀತಿ 'ಮದುವೆ' ಕಾದಿತ್ತು!

ನನ್ನ ಮೊತ್ತ ಮೊದಲ ರಂಗ ಪ್ರವೇಶದ ವೈಖರಿ, ವೈಭವ, ವೈಶಿಷ್ಟ್ಯ ಹೀಗಿತ್ತು. ಇದು ನಡೆದದ್ದು ೧೯೩೭ರಲ್ಲಿ. ತಳಿರು - ತೋರಣಗಳ ಅಡಿಯಲ್ಲಿ, ಮಂಗಳವಾದ್ಯದ ನಡುವೆ, ಸಡಗರ ಸಂಭ್ರಮದೊಡನೆ, ಮದುವೆಯ ಮಂಗಳ ಕಾರ್ಯಕ್ಕೆಂದು ನಡೆಯಿತು ನನ್ನ ರಂಗ ಪ್ರವೇಶ. ಆ ಶುಭ- ಸುಮುಹೂರ್ತದ ಬಲವೇ ಇರಬೇಕು; ಅಂದು ಹತ್ತಿದ ರಂಗಸ್ಥಳ ನನ್ನನ್ನು ಇಂದಿಗೂ ಬಿಟ್ಟಿಲ್ಲ. ಅಂದು ಹಚ್ಚಿದ ರಂಗು ಇನ್ನೂ ಅಳಿಸಿಹೋಗಿಲ್ಲ. ನನ್ನ ಬದುಕಿನ ಎಲ್ಲ ನೋವು- ನಲಿವುಗಳಿಗೆ, ಆಗು - ಹೋಗುಗಳಿಗೆ, ಏಳು- ಬೀಳುಗಳಿಗೆ ರಂಗ ಮಂಟಪವೇ ಕ್ಷೇತ್ರವೂ ಆಗಿದೆ, ಸೂತ್ರವೂ ಆಗಿದೆ, ಸಾಕ್ಷಿಯೂ ಆಗಿದೆ.

ಆ ಮುನ್ನವೇ ನನ್ನ ತಮ್ಮ ಪರಮಶಿವನ್ ಕೂಡಾ ಹಲವಾರು ನಾಟಕಗಳಲ್ಲಿ ಬಾಲನಟನಾಗಿದ್ದ. ಸಂಗೀತವನ್ನೂ ಕಲಿತು, ಕಂದ- ಸೀಸ ಪದ್ಯಗಳನ್ನು ಸಲೀಸಾಗಿ, ಸುಲಲಿತವಾಗಿ, ಸುಮಧುರವಾಗಿ ಹಾಡುತ್ತಿದ್ದ. ಅವನ ಅಭಿನಯಕ್ಕೆ ಅಮ್ಮ ಎಂದೂ ಅಡ್ಡಿ ಮಾಡಿರಲಿಲ್ಲ. ಬದಲಿಗೆ ಅವರ ಸಮ್ಮತಿ, ಸಡಗರವೇ ಇತ್ತು. ಆದರೆ ನಾನು ಪಾತ್ರ ವಹಿಸಿದ್ದು ಮಾತ್ರ ಅವರಿಗೆ ಅದೆಷ್ಟೂ ಸಮಾಧಾನವಾಗಲಿಲ್ಲ. ಬಹಳಷ್ಟು ದಿನ ಗೊಣಗಾಟ ನಡೆಸಿಯೇ ಇದ್ದರು.

ಮೈಸೂರಿನ 'ಪೀರ್ ಸಾಹೇಬರ ಕಂಪನಿ' ಆ ಕಾಲದ ಹೆಸರಾಂತ ಕಂಪನಿ. ಅದರಲ್ಲಿ ಅನೇಕ ಜನಪ್ರಿಯ ನಟರಿದ್ದರು. ಹುಣಸೂರು ಕೃಷ್ಣಮೂರ್ತಿ, ಬಿ. ಎನ್. ಚಿನ್ನಪ್ಪ, ಎಚ್. ಎಲ್. ಎನ್. ಸಿಂಹ, ಎಂ. ಮಾಧವರಾವ್ ('ಸಂಸಾರ ನೌಕೆ' ನಾಟಕದ 'ಢಿಕ್ಕಿ' ಖ್ಯಾತಿ )- ಹೀಗೆ. ಪೀರ್ ಸಾಹೇಬರು ಆಕಸ್ಮಿಕವಾಗಿ ನಿಧನರಾದ ಮೇಲೆ ಇವರೆಲ್ಲ ಆ ಕಂಪನಿಯಿಂದ ಹೊರಬಂದು, ೧೯೪೩ರಲ್ಲಿ 'ಕಲಾ ಸೇವಾ ಮಂಡಲಿ'ಯನ್ನು ಹುಟ್ಟು ಹಾಕಿದ್ದರು. ಅಲ್ಲಿ- ಇಲ್ಲಿ ಛತ್ರಗಳನ್ನು ಬಾಡಿಗೆಗೆ ಹಿಡಿದು 'ಸದಾರಮೆ', 'ಪ್ರೇಮಲೀಲ' ಮೊದಲಾದ ಸಾಮಾಜಿಕಗಳನ್ನು ಆಡುತ್ತಿದ್ದರು.

ಒಂದು ದಿನ ಅವರೆಲ್ಲ ನಮ್ಮ ಮನೆಗೆ ಧಾಳಿಯಿಟ್ಟರು. 'ನಿಮ್ಮ ಹುಡುಗಿಯನ್ನು ನಾಟಕಕ್ಕೆ ಸೇರಿಸಿ' ಎಂದು ಅಮ್ಮನನ್ನು ಪುಸಲಾಯಿಸತೊಡಗಿದರು. ಎಲ್ಲರೂ ಮೊದಲಿನಿಂದಲೂ ನಮ್ಮ ಕುಟುಂಬಕ್ಕೆ ತಿಳಿದವರು, ಹಿತೈಷಿಗಳು. ಒತ್ತಾಯ- ಒತ್ತಾಸೆ- ಪರಿಸ್ಥಿತಿಯ ಒತ್ತಡ ಎಲ್ಲವೂ ಒಟ್ಟಾಗಿ ಸೇರಿ, ನಮ್ಮಮ್ಮ ಒಲ್ಲದಿದ್ದರೂ- ಒಪ್ಪಲೇ ಬೇಕಾಯಿತು. ನನ್ನ ಜೊತೆ ತಂಗಿ ಸುಂದರಮ್ಮ ಕೂಡ ಹೊರಟಳು. ಮೊಟ್ಟ ಮೊದಲಿಗೇ ನನಗೆ 'ಸಂಸಾರ ನೌಕೆ'ದಲ್ಲಿ ಸರಳೆಯ ಪಾತ್ರದ ಪಟ್ಟ ಕಟ್ಟಿದರು. ನನ್ನ ತಂಗಿಗೂ ಉತ್ತಮ ಪಾತ್ರಗಳು ದೊರೆತವು. ಆಗ ಕಂಪನಿಗಳ ಸಂಖ್ಯೆ ಸಾಕಷ್ಟಿದ್ದರೂ, ಅರಿತ - ನುರಿತ ಪಾತ್ರಧಾರಿಗಳ ಅದರಲ್ಲೂ ನಟಿಯರ ಕೊರತೆ ಇದ್ದೇ ಇರುತ್ತಿತ್ತು. ಹೀಗಾಗಿ ಒಬ್ಬೊಬ್ಬ

ನಟನೇ ಹಲವು ಪಾತ್ರಧಾರಿಯಾಗುತ್ತಿದ್ದ. ಇದು ಕಷ್ಟದ ಕೆಲಸ. ನಟರ ಕ್ಷಮತೆ, ದಕ್ಷತೆ, ಪ್ರಸಂಗಾವಧಾನತೆಗೆ ಕಠಿಣ ಪರೀಕ್ಷೆ. ಈ ಕಂಪನಿಯಲ್ಲೂ ಅಷ್ಟೇ. ಢಿಕ್ಕಿ ಮಾಧವರಾಯರು ಹಾರ್ಮೋನಿಯಂ ನುಡಿಸುತ್ತಿದ್ದರು. ತಮ್ಮ ದೃಶ್ಯ, ಸನ್ನಿವೇಶ ಬಂತೆಂದರೆ ಕ್ಷಣಾರ್ಧದಲ್ಲಿ ಹಾರ್ಮೋನಿಯಂ ಕೈ ಬಿಟ್ಟು ರಂಗದ ಮೇಲೆ ಹಾರಿ ಬಂದು 'ಆಚಾರಿ'ಯಾಗಿ ಅವತರಿಸಿ ನೋಡುಗರನ್ನು ರಂಜಿಸುತ್ತಿದ್ದರು!

'ಕಲಾ ಸೇವಾ ಮಂಡಳಿ'ಗೆ ಕಲಾಸೇವೆಯ ಹಂಬಲ, ಕಲಾವಿದರ ಬಲ, ಕಲಾರಸಿಕರ ಬೆಂಬಲ ಸಾಕಷ್ಟು ಪ್ರಬಲವಾಗಿಯೇ ಇದ್ದವು. ಆದರೆ ಕುಗ್ಗತೊಡಗಿದ್ದು, ಕುಸಿದಿದ್ದು ಕಲೆಕ್ಷನ್‌ನ ಬಲವಷ್ಟೇ! ಸಾಲದೆಂಬಂತೆ ಹುಣಸೂರು ಮತ್ತು ಢಿಕ್ಕಿಯವರಿಗೆ ಚಲನಚಿತ್ರದ ಕಡೆಗಿನ ಒಲವೂ ಬೆಳೆಯಿತು. ತತ್ಫಲವಾಗಿ ಕಲಾಸೇವಾ ಮಂಡಲಿಯ ಬಾಗಿಲೇ ಮುಚ್ಚಿತು.

## ನನ್ನ ಸ್ಥಾನ ಭದ್ರಗೊಳಿಸಿದ 'ಸುಭದ್ರೆ'!

ಆಗ ನನ್ನ ಪಾಲಿಗೆ ತೆರೆದಿದ್ದು 'ಚಾಮುಂಡೇಶ್ವರಿ ಕಂಪನಿ'ಯ ಬಾಗಿಲು. ಅಲ್ಲಿಗೆ ೧೯೩೯ರಲ್ಲಿ ಸೇರಿದೆ. ನಾನಾಗ ಹದಿಮೂರರ ಬಾಲೆ. ಅದು ದೊಡ್ಡ ದೊಡ್ಡ ಕಲಾವಿದರಿದ್ದ ಕಂಪನಿ. ಹೀಗಾಗಿ ಅವರೊಂದಿಗೆ ಸಣ್ಣ- ಸಣ್ಣ ಪಾತ್ರ ಸಿಕ್ಕರೂ ಸಂತೋಷ- ಸಂತೃಪ್ತಿ. ಅಲ್ಲಿನ ಪದ್ಧತಿಯೇ ಹಾಗೆ. ಮೊತ್ತ ಮೊದಲಿಗೇ ಯಾವ ಪಾತ್ರವೂ ದೊರೆಯದು. ನಾಟಕಗಳನ್ನು ನೋಡಿ- ನೋಡಿ, ಮಾತು - ಹಾಡು ಕಲಿತು, ನಟನೆ- ನರ್ತನವನ್ನು ರೂಢಿಸಿಕೊಂಡ ಮೇಲೆ ರಂಗಪ್ರವೇಶ. ಮಾತೇ ಇಲ್ಲದ ಮೂಕ- ಅಮುಖ್ಯ ಪಾತ್ರಗಳು, ನಂತರ ಸಂಭಾಷಣೆಯಿರುವ ಸಣ್ಣ ಪಾತ್ರಗಳು. ಆಮೇಲೆ ಸಂಗೀತವೂ ಬೇಕಾದ ಸ್ವಲ್ಪ ಪ್ರಮುಖ ಪಾತ್ರಗಳು. ಎಲ್ಲವನ್ನೂ ಕರಗತ ಮಾಡಿಕೊಂಡಿದ್ದಾರೆಂದು ಖಾತ್ರಿಯಾದರೆ ಮಾತ್ರ ಪ್ರಾಮುಖ್ಯ- ಪ್ರಾಶಸ್ತ್ಯ - ಪ್ರಾಧಾನ್ಯತೆ. ಆದರೆ ಯಾವುದೇ ಪಾತ್ರ ಮಾಡದಿದ್ದವರಿಗೂ ಕೂಡ ಎಲ್ಲ ಮಾತು - ಮಟ್ಟು - ಹಾಡುಗಳ ತರಬೇತಿ- ತಾಲೀಮು ತಪ್ಪದೆ ನೀಡುತ್ತಿದ್ದರು.

ನನ್ನ ಅದೃಷ್ಟ. ಎರಡನೇ ನಾಯಕಿಯಾಗಿ ನಾನು ಸಾಕಷ್ಟು ಬೇಗಲೇ ಪಟ್ಟ ಕಟ್ಟಿಸಿಕೊಂಡೆ. ಅಲ್ಲಿ ಪ್ರಧಾನ ನಾಯಕಿಯಾಗಿದ್ದವರು, ಮಳವಳ್ಳಿ ಸುಂದರಮ್ಮ. ತುಂಬಾ ಗೌರವಾನ್ವಿತ ಅಭಿನೇತ್ರಿ. ಘನ- ಗಂಭೀರ ಪಾತ್ರಗಳನ್ನು ಮನಮುಟ್ಟುವಂತೆ ಮಾಡುತ್ತಿದ್ದರು. ಆಕೆ ನನ್ನ ನಟನೆ, ನರ್ತನ, ಮಾತು - ಹಾಡುಗಳು, ಹಾವ - ಭಾವಗಳನ್ನು ತುಂಬು ಪ್ರೀತಿಯಿಂದ ತಿದ್ದಿ ತರಬೇತಿ ನೀಡಿದರು.

ಬಿ.ನಾಗೇಶರಾಯರು, ಕೊಟ್ಟೂರಪ್ಪ, ಬಸವರಾಜಪ್ಪ ಮೂವರೂ ಆ ಕಾಲದ ಪ್ರಸಿದ್ಧ ಕಲಾವಿದರು. ಇವರೆಲ್ಲ ಆಗ ಚಾಮುಂಡೇಶ್ವರಿ ಕಂಪನಿಯಲ್ಲಿದ್ದರು. ಸಂಗೀತ, ಸಾಹಿತ್ಯ, ಅಭಿನಯ ಮೂರರಲ್ಲೂ ಪರಿಣತರು. ನಾಗೇಶರಾಯರಿಂದಲೇ ನಮಗೆಲ್ಲ ಹಾಡುಗಾರಿಕೆಯ ತರಬೇತಿ. ನಾನೇನಾದರೂ ಅಲ್ಪ ಸ್ವಲ್ಪ ಅಪಶ್ರುತಿ ಹಾಡಿದರೂ ಅವರು ಸಹಿಸುತ್ತಿರಲಿಲ್ಲ.

ಉಸಿರು ತೊಗೊಂಡು ಶೃತಿ ಸೇರಿಸಿ ಹಾಡು'
'ಏನಮ್ಮಾ ಹೀಗೆ ಹಾಡುತ್ತೀ? ಚೆನ್ನಾಗಿ ಉಸಿರು ತೊಗೊಂಡು ಶೃತಿ ಸೇರಿಸಿ ಹಾಡು' ಎನ್ನುತ್ತಿದ್ದರು. ನನಗೆ ರಂಗ ಸಂಗೀತ- ಅಭಿನಯ ಎರಡರಲ್ಲೂ ಒಳ್ಳೆ ಅಭ್ಯಾಸವಾಗಿದ್ದು ಅಲ್ಲಿಯೇ. ಆ ಮಹನೀಯರೆಲ್ಲರ ಶ್ರದ್ಧೆ- ಶ್ರಮದಿಂದಲೇ ರಂಗಕಲೆಯಲ್ಲಿ ನನಗೆ ಪರಿಣತಿ, ನೈಪುಣ್ಯತೆ ಬಂತು. ಹಾಗಾಗಿ ನಾನು ಅಲ್ಲೇ ನೆಲೆ ನಿಂತೆ. ನಿಪುಣ ಶಿಲ್ಪಿಗಳು ಕಡೆದು ನಿಲ್ಲಿಸಿದ ಸುಂದರ ಪುತ್ಥಳಿ ನಾನಾದೆ. ಕಲಿಸಬಲ್ಲ ಬಲ ಅವರಲ್ಲಿತ್ತು, ಕಲಿಯಬೇಕೆಂಬ ಛಲ ನನ್ನಲ್ಲಿ. ನೇರವಾಗಿದ್ದ ಗುರಿ ತಲುಪಲು ನನಗೆ ನೆರವಾದ ಗುರುಗಳು ಅನೇಕ.

ಸುಂದರಮ್ಮ- ನಾಗೇಶರಾಯರ ಸುಭದ್ರೆ - ಅರ್ಜುನನ ಪಾತ್ರಗಳು ಆ ಕಾಲದಲ್ಲಿ ಮನೆಮನೆಯ ಮಾತಾಗಿತ್ತು. ತುಂಬು ತನ್ಮಯತೆ, ತಲ್ಲೀನತೆಯಿಂದ ಪೂಜಾ ಸನ್ನಿವೇಶವೊಂದರಲ್ಲಿ ಅವರು ಪಾಲ್ಗೊಳ್ಳುತ್ತಿದ್ದ ದೃಶ್ಯವಂತೂ ಮನಸೂರೆಗೊಳ್ಳುತ್ತಿತ್ತು. ಅದು ಇಂದಿಗೂ ನನ್ನ ಕಣ್ಣ ಮುಂದೆ ಕಟ್ಟಿದಂತಿದೆ. ಅದು ಲೆಕ್ಕಕ್ಕೇನೋ ಐದು ಹತ್ತು ನಿಮಿಷಗಳ ಪ್ರಸಂಗ. ಆದರೆ ಇಬ್ಬರೂ ಒಂದೊಂದೇ ಸ್ವರವನ್ನು ಬೇರೆ ಬೇರೆ ಸ್ಥಾಯಿಯಲ್ಲಿ ನಿರೂಪಿಸುವ 'ಸಂಗತಿ'ಯನ್ನು ಹಾಕುತ್ತಿದ್ದರು. ಹೀಗಾಗಿ ಅದನ್ನು ಒಮ್ಮೊಮ್ಮೆ ಒಂದು ಅರ್ಧ ಘಂಟೆಯವರೆಗೆ ವಿಸ್ತರಿಸಿ ಬಿಡುತ್ತಿದ್ದರು. ನೋಡುಗರಿಗೂ ಅದರಿಂದ ಅತೀವ ಆನಂದ. ಬರಹ ಕಲಿಯದವರೂ ಕೂಡಾ ಇದನ್ನು ಆಸ್ವಾದಿಸಿ ಆನಂದಿಸುತ್ತಿದ್ದರು. ಮೂಲೆ-ಮೂಲೆಯ ಹಳ್ಳಿಗಳಿಂದ ಮೈಲುಗಟ್ಟಲೆ ಕಾಲುನಡಿಗೆಯಲ್ಲೋ, ಗಾಡಿಕಟ್ಟಿಸಿಕೊಂಡೋ ಬರುತ್ತಿದ್ದರು. ತಮಗೆ ಇಷ್ಟವಾದ ಹಾಡನ್ನು ಮತ್ತೆ ಮತ್ತೆ ಕೇಳಬಯಸಿ ' Once More' ಕೂಗಿ ತಮ್ಮ ಆಸೆಯನ್ನು ಈಡೇರಿಸಿಕೊಳ್ಳುತ್ತಿದ್ದರು. ಆ ಸುನಾದದ ಮೋಡಿಗೆ, ಸುಮಧುರ ಹಾಡಿಗೆ, ಸುಸ್ವರದ ಜಾಡಿಗೆ ಏನನ್ನೋಣ? ಆ ಮುಗ್ಧ ಮಂದಿಯ ರಸಾಸ್ವಾದನಾ ಗುಣವನ್ನು ಎಷ್ಟೆಂದು ಬಣ್ಣಿಸೋಣ? ಆಗಿನವರಿಗೆ ಅಷ್ಟೊಂದು ಸಂಗೀತ ಪ್ರೇಮ. ಅದೇ ಈಗ ನೋಡಿ: ರಂಗದ ಮೇಲೆ ಸ್ವಲ್ಪ ರಾಗವಿಸ್ತಾರ ಮಾಡಿದರೂ, ಗೀತೆಯನ್ನು ತುಸು ಹೆಚ್ಚು ಹೊತ್ತು ಹಾಡಿದರೂ, ಸಭಾಂಗಣದಿಂದ ಎದ್ದೇ ಬಿಡುತ್ತಾರೆ. ಕಾಫಿಯೋ, ಕಡಲೇಕಾಯಿಯೋ, ಸಿಗರೇಟೋ ಸೇವಿಸಿ ಹಾಡು ಮುಗಿದದ್ದು ಖಂಡಿತವಾದ ಮೇಲೇ ಒಳಗೆ ಬರುತ್ತಾರೆ.

ಸುಂದರಮ್ಮನವರ ಜೊತೆಗೆ ಆಗ ತಾನೇ ಎರಡನೆ ನಾಯಕಿ ಪಟ್ಟಕ್ಕೆ ಏರಿದ್ದೆನಷ್ಟೇ. ಅಂತೂ- ಇಂತೂ ಮರ ಏರಿದ್ದೆ. ಈಗ ಗಿರಿಯನ್ನೇ ಏರುವ, ಶಿಖರವನ್ನೇ ಸೇರುವ ಹಿರಿಯಾಸೆ, ಅಭಿಲಾಷೆ. ಸುಂದರಮ್ಮನ ಹಾಗೆ ನಾಯಕಿ ಪಾತ್ರ ವಹಿಸುವ ಆಕಾಂಕ್ಷೆ. ನನ್ನ ಇತಿ-ಮಿತಿಯೇನೋ ಗೊತ್ತಿತ್ತು. ಆದರೆ ಆ ಆಸೆಯೂ ಮಿತಿ ಮೀರಿತ್ತು. ನನ್ನ ಅದೃಷ್ಟ ಮಾತ್ರ ಚೆನ್ನಾಗಿತ್ತು. ಗತಿಗೇಡೇನಾಗಲಿಲ್ಲ!



ಸುಂದರಮ್ಮನವರಿಗೆ ಆಗಾಗ ಆರೋಗ್ಯ ಕೈ ಕೊಡುತ್ತಿತ್ತು. ಒಂದು ದಿನ 'ವೀರ ಅಭಿಮನ್ಯು' ನಾಟಕವಿದೆ. ಅವರಿಗೆ ವಿಪರೀತ ಹೊಟ್ಟೆ ನೋವು ಕಾಣಿಸಿಕೊಂಡಿತು. ನನ್ನನ್ನು ಕರೆಸಿ 'ಇಂದು ನೀನೇ ಸುಭದ್ರೆಯಾಗು' ಎಂದು ಬಿಟ್ಟರು. ಅವರ ಅಭಿನಯವನ್ನು ದಿನದಿನವೂ ನೋಡಿದ್ದೆ, ಕ್ಷಣ ಕ್ಷಣಕ್ಕೂ ಆನಂದಿಸಿದ್ದೆ. ಅವರ ಮಾತು- ಹಾಡುಗಳು ಹೃದ್ಗತವೂ ಆಗಿದ್ದವು. ಹೀಗಾಗಿ ಅವರನ್ನು ಅಚ್ಚು ಕಟ್ಟಾಗಿ ಅನುಸರಿಸಲು, ಅನುಕರಿಸಲು ಯಾವುದೇ ಅನುಮಾನವೂ ಕಾಣಲಿಲ್ಲ. ಆದರೂ ಅಳುಕಿನಿಂದಲೇ ಒಪ್ಪಿಕೊಂಡೆ. ಸುಭದ್ರೆಯಾಗಿ ರಂಗವನ್ನೂ ಪ್ರವೇಶಿಸಿದೆ. ಆಗಲೇ ಸಮಸ್ಯೆಯೊಂದು ಎದುರಾಗಿದ್ದು! ಸೊಗಸಾದ ಸೀಸ ಪದ್ಯವೊಂದನ್ನು ಹೇಳುತ್ತಾ, ಸುಭದ್ರೆ ಅಭಿಮನ್ಯುವನ್ನು ಆಶೀರ್ವದಿಸಬೇಕು. ಆಗ ನನಗೆ ಸಾಕಷ್ಟು ಆತಂಕ, ಅನುಮಾನ. ಎಲ್ಲಿ ತಾಳ- ಲಯ ತಪ್ಪುತ್ತದೋ, ಅವಮಾನವಾಗುವುದೋ ಅಂತ. ಆದರೂ ಎಲ್ಲಿಲ್ಲದ ಧೈರ್ಯ ತಂದು ಕೊಂಡು ಹಾಡಿಯೇ ಬಿಟ್ಟೆ. ದೇವರ ದಯೆ-ಹಾಡು ಚೆನ್ನಾಗಿಯೇ ಮೂಡಿ ಬಂತು. ನೋಡುಗರು ಚಪ್ಪಾಳೆ ತಟ್ಟಿದರು. ನನ್ನ ನಟನೆ, ಹಾಡುಗಾರಿಕೆ ಎಲ್ಲರಿಗೂ ಹಿಡಿಸಿತು. ಮುಖ್ಯವಾಗಿ ಸುಂದರಮ್ಮನವರೇ ಸಂತೋಷಪಟ್ಟು 'ಚೆನ್ನಾಗಿ ಮಾಡಿದೆಯಮ್ಮಾ' ಎಂದು ಶಭಾಸ್‌ಗಿರಿ ಕೊಟ್ಟರು. ನನ್ನ ಹೆಮ್ಮೆ - ಹರ್ಷ ಮುಗಿಲು ಮುಟ್ಟಿದವು. ಹೀಗೆ ಆಕಸ್ಮಿಕವಾಗಿ ದೊರೆತ ಅವಕಾಶದಿಂದ ಆತ್ಮ ವಿಶ್ವಾಸ ನೂರ್ಮಡಿಯಾಯ್ತು. ನಂತರದ ದಿನಗಳಲ್ಲಿ ಕೊಟ್ಟೂರಪ್ಪ, ನಾಗೇಶರಾಯರಂತಹ ಮಹಾನ್ ಕಲಾವಿದರೊಡನೆಯೂ ಸಲೀಸಾಗಿ ನಟಿಸುವಂತಾಯ್ತು.

ಮೊದಲಿಂದಲೂ ನನಗೆ ನಕ್ಕು ನಲಿಸುವ ಪಾತ್ರಗಳು, ಪ್ರೇಮ- ಪ್ರೀತಿ ತೋರುವ ಪಾತ್ರಗಳೆಂದರೆ ಅಷ್ಟಕ್ಕಷ್ಟೇ. ಹಾಗೆ ನಟಿಸಲು ಇಂದಿಗೂ ಕಷ್ಟವೇ. ನನಗಿಷ್ಟವಾದುದೆಂದರೆ ಗಯ್ಯಾಳಿ-ಬಜಾರಿಯ ಇಲ್ಲವೇ ಗೋಳು ಕರೆವ ಪಾತ್ರಗಳು.

ನೋಡುಗರಿಗೂ ಕಂಪನಿಗಳವರಿಗೂ ಅವೇ ಹಿಡಿಸಿತ್ತೇನೋ ಅಥವಾ ನನಗವು ಒಪ್ಪುತ್ತವೆ ಎನಿಸಿತ್ತೇನೋ? ಆಗಿನಿಂದಲೂ ಬರಬರುತ್ತಾ ನನಗೆ ಅಂಥ ಪಾತ್ರಗಳೇ ಕಟ್ಟಿಟ್ಟ ಬುತ್ತಿಯಾದವು.

ಆ ಕಾಲಕ್ಕೆ ನುರಿತ ನಟಿಯರ ಕೊರತೆ ತುಂಬಾ. ಒಳ್ಳೆಯ ನಟಿಯೊಬ್ಬಳನ್ನು ಕಂಡರೆ ಸಾಕು. ಬೇರೆ - ಬೇರೆ ಕಂಪನಿಗಳು, ಕಲಾವಿಲಾಸಿ ತಂಡಗಳಿಂದ ಆಕೆಗೆ ಕರೆ, ಬೇಡಿಕೆ. ಕಾಡಿಬೇಡಿ, ಆಸೆ-ಆಮಿಷ ಒಡ್ಡಿ ಕರೆದೊಯ್ದು ಬಿಡುತ್ತಿದ್ದರು. ಒಮ್ಮೆಗೇ ಎಂಟು- ಹತ್ತು ಪ್ರದರ್ಶನಗಳು. ನನಗೂ ಇಂಥ ಅವಕಾಶಗಳು ಹಲವಾರು ಬಂದವು. ಆಗ 'ಚಾಮುಂಡೇಶ್ವರಿ'ಯಲ್ಲೇನೋ ನಟಿಯರನೇಕರು ಇದ್ದರು. ಹೀಗೆ ಅಲ್ಲಿನ ಎಲ್ಲ

ಆಟಗಳಿಗೂ ನಾನು ಇದ್ದೇ ಇರಬೇಕೆಂದೇನಿರಲಿಲ್ಲ. ಆದರೆ ಆ ಹೊರಗಿನ ಸಂಸ್ಥೆಗಳ ನಾಟಕಗಳಲ್ಲಿ ನಾನೇ ಸದಾ ನಾಯಕಿ, ಅದೇ ದೊಡ್ಡ ಆಕರ್ಷಣೆ. ಆ ಸದವಕಾಶಗಳನ್ನು ತಪ್ಪಿಸಿಕೊಳ್ಳಲು ಮನಸ್ಸೇಬಾರದು. ಏನಿದ್ದರೂ ಚಾಮುಂಡೇಶ್ವರಿಯ ಬಗೆಗೆ ಮಾತ್ರ ನನಗೆ ಅಪಾರ ಆದರ, ಅಭಿಮಾನ. ಅಲ್ಲಿಗೇ ನನ್ನ ಆದ್ಯತೆ. ಹೀಗಾಗಿ ಬೇರೆ ಕಡೆ ನಾಟಕಗಳು ಮುಗಿಯುತ್ತಿದ್ದ ಹಾಗೆಯೇ ಚಡಪಡಿಸಿ ಮರಳಿ ಬಂದು ಬಿಡುತ್ತಿದ್ದೆ. ಇದರಿಂದ ಚಾಮುಂಡೇಶ್ವರಿ ಕಂಪನಿಯ ಮೂಲಕ ಕಲಾದೇಗುಲಕ್ಕೇ ಸೇರಿದಂತಾಯಿತು. ಎಲ್ಲರ ನೆರವಿನಿಂದ ಅಲ್ಲೇ ನೆಲೆಯೂರಿ 'ಕಲಾವಿದೆ' ಎನ್ನಿಸಿಕೊಳ್ಳುವಂತೆಯೂ ಆಯಿತು.

## ತುಟಿಗು-ತುತ್ತಿಗು ಎನಿತು ಅಂತರ?

ಗುಬ್ಬಿ ಕಂಪನಿ ಆಗ ನಮ್ಮ ಮೈಸೂರು ಸೀಮೆಯೇ ಅಲ್ಲದೆ ನೆರೆಯ ಪ್ರಾಂತ್ಯಗಳಲ್ಲೂ ಹೆಸರುವಾಸಿಯಾಗಿ ತುಂಬಾ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಅಪ್ರತಿಮ ಕಲಾವಿದರು, ಅದ್ದೂರಿ ರಂಗ ಸಜ್ಜಿಕೆ, ಅಭೂತ ಪೂರ್ವ ತಂತ್ರಗಾರಿಕೆ, ಅತ್ಯುತ್ತಮ ಪ್ರದರ್ಶನಗಳು, ಅತಿ ವ್ಯವಸ್ಥಿತ ಆಡಳಿತ ಇವು ಅದರ ವೈಶಿಷ್ಟ್ಯಗಳು. ಆಗಿನ ರಂಗ ಕಲಾವಿದ - ತಂತ್ರಜ್ಞರಿಗೆಲ್ಲ ಸಾಮಾನ್ಯವಾಗಿ ಒಂದೇ ಒಂದು ಆಸೆ : 'ಗುಬ್ಬಿ ಕಂಪನಿ ಸೇರಿ ಹೆಸರು ಮಾಡಬೇಕು!'. ನಾನೂ ಇದಕ್ಕೆ ಹೊರತಾಗಿರಲಿಲ್ಲ. ಅಂಥದೊಂದು ಅವಕಾಶವೂ ಬೇಗ ನನ್ನನ್ನೇ ಅರಸಿ ಬಂತು.

ಗುಬ್ಬಿ ವೀರಣ್ಣನವರ ಮಗಳು ಮಾಲತಮ್ಮ ಅಲ್ಲಿನ ಮುಖ್ಯ ಕಲಾವಿದೆ. ಅವರೊಮ್ಮೆ ನಾಟಕದಲ್ಲಿ ಸೀತೆಯ ಪಾತ್ರ ಮಾಡುತ್ತಿದ್ದಾರೆ. ಸೀತೆ, ಭೂಮಾತೆಯಲ್ಲಿ ಐಕ್ಯಗೊಳ್ಳುವ ದೃಶ್ಯ. ನೈಜತೆಯನ್ನು ಮೂಡಿಸಲು ರಂಗದ ಮಧ್ಯೆ ಮಾಡಿರುತ್ತಿದ್ದ ಹಳ್ಳಕ್ಕೆ ಇನ್ನೇನು ಆಕೆ ಇಳಿಯಬೇಕು. ಏನು ದುರದೃಷ್ಟವೋ, ವಿದ್ಯುತ್ ವ್ಯವಸ್ಥೆಯಲ್ಲಿ ಏನೋ ವ್ಯತ್ಯಾಸವಾಯಿತು. ಮಾಲತಮ್ಮನಿಗೆ ಷಾಕ್ ತಗುಲಿ ಕುಸಿದು ಬಿದ್ದರು. ಆಕೆ ತನ್ನ ಕಾಲೇ ಕಳೆದುಕೊಳ್ಳುವಂತಾಯಿತು. ಅದರಿಂದ ಅಭಿಜಾತ ಅಭಿನೇತ್ರಿಯೊಬ್ಬರ ಕಲಾಜೀವನವೇ ಅನಿರೀಕ್ಷಿತ ಅಂತ್ಯ ಕಂಡಿತು.

ಕುಟುಂಬ- ಕಂಪನಿಗಳಲ್ಲಿನ ಕಷ್ಟ ಕೋಟಲೆಗಳೆಷ್ಟೇ ಇರಲಿ- ನಾಟಕ ಆಡಲೇಬೇಕು, ಆಟ ಕಟ್ಟಲೇ ಬೇಕು, ನಿಲ್ಲುವಂತಿಲ್ಲ. ಇದು ನಾಟಕ ಕಂಪನಿಗಳಿಗೆ ಅಂಟಿದ ಜಾತಕ, ಯಜಮಾನ ವೀರಣ್ಣನವರ ಜಾಯಮಾನ. ಹೀಗಾಗಿ ಮಾಲತಮ್ಮನ ಜಾಗಕ್ಕೆ ಬೇರೆ ಕಲಾವಿದೆಗಾಗಿ ತರಾತುರಿಯ ಹುಡುಕಾಟ ನಡೆಸಿದರು. ನನ್ನ ಹೆಸರೂ ಅವರ ಕಿವಿಗೆ - ಮನಸ್ಸಿಗೆ ಬಂತು. ಅವರಿಗೆ ನಾನು ಸೀತೆ ಪಾತ್ರಕ್ಕೆ ಸೂಕ್ತವಾಗಬಹುದು ಎಂದೆನಿಸಿರಬೇಕು. ನನ್ನನ್ನು, ತಮ್ಮ ಮನೆಗೆ ಕರೆಸಿಕೊಂಡರು. ತುಂಬು ವಿಶ್ವಾಸದಿಂದ ಮಾತಾಡಿಸಿದರು. "ನಮ್ಮ ಕಂಪ್ನಿಗೆ ಬಂದು ಬಿಡಪ್ಪಾ" ಅಂತ ಮಮತೆಯ ಕರೆಯಿತ್ತರು. ಅವರು ಯಾವಾಗಲೂ ಹಾಗೆ, ನನ್ನೊಡನೆ 'ಬಾಪ್ಪಾ, ಹೋಗಪ್ಪಾ' ಎಂದೇ ಸಂಭಾಷಿಸುತ್ತಿದ್ದುದು. ತಿಂಗಳಿಗೆ

ನೂರೈವತ್ತು ರೂಪಾಯಿ ಸಂಬಳ ನಿಗದಿ ಮಾಡಿದರು. ಆಗ ನಮಗೆ ತುಂಬಾ ಕಷ್ಟದ ದಿನಗಳು. ತಾಯಿಗೋ ಕಡಿಮೆ ಸಂಬಳ. ಆರು ಜನರ ಹೊಟ್ಟೆ ಪಾಡು, ಬಟ್ಟೆ-ಬರೆ ಅಷ್ಟರಲ್ಲೇ ನಡೆಯಬೇಕಾಗಿತ್ತು. ಉಣ್ಣುವುದಕ್ಕಾದರೆ- ಉಡಲಿಕ್ಕಾಗದು ಎನ್ನುವ ಸ್ಥಿತಿ. ವೀರಣ್ಣನವರು ಗೊತ್ತು ಮಾಡಿದ ಸಂಬಳವೇನೋ ಸಾಲದು ಎನಿಸಿತು. ಏಕೆಂದರೆ ಚಾಮುಂಡೇಶ್ವರಿಯಲ್ಲಿ ಇರುತ್ತಲೇ ಬೇರೆ ಬೇರೆ ಹವ್ಯಾಸಿ ಕಲಾ ಸಂಸ್ಥೆಗಳಲ್ಲಿ ದುಡಿದು ದಿನಕ್ಕೆ ಮೂವತ್ತು - ಮೂವತ್ತೈದು ಗಳಿಸುತ್ತಿದ್ದೆ. ಆದರೆ ಏನು ಮಾಡುವುದು? ವೀರಣ್ಣನವರ ವಿಶ್ವಾಸ- ವಾತ್ಸಲ್ಯ, ಹೆಸರಾಂತ ಕಂಪನಿ ಕುರಿತು ವ್ಯಾಮೋಹ- ವಾಂಛಲ್ಯ. ಭವಿಷ್ಯವನ್ನು ಗಮನದಲ್ಲಿರಿಸಿ ಅವರ ಮಾತಿಗೆ 'ಹೂಂ' ಎಂದೆ. ಕಂಪನಿಗೆ ಸೇರಬೇಕಾದ ದಿನವನ್ನು ಮುಂದೆ ತಿಳಿಸುತ್ತೇನೆಂದರು ಯಜಮಾನರು. ನಾನು ಹಿಗ್ಗಿನಿಂದಲೇ ಹಿಂತಿರುಗಿದೆ.

ಒಂದು ಸಂಜೆ ಕಲಾವಿಲಾಸಿ ಸಂಸ್ಥೆಯೊಂದರ ನಾಟಕಕ್ಕೆಂದು ಹುಬ್ಬಳ್ಳಿಗೆ ಹೊರಟು ನಿಂತಿದ್ದೇನೆ. ಆಗ ವೀರಣ್ಣನವರು ಹೇಳಿಕಳಿಸಿದರು. "ನಾಳೆ ನಮ್ಮ ನಾಟಕ ಮರೀ, ನೀನು ಬಂದು ಬಿಡಪ್ಪ" ಎಂದರು. ನನಗೆ ಏನೊಂದೂ ತೋಚಲಿಲ್ಲ. ಕಷ್ಟ ನಿಷ್ಠುರ ಏನೇ ಬರಲಿ, ಕೊಟ್ಟ ಮಾತಿಗೆ ನಾನು ಯಾವತ್ತೂ ತಪ್ಪಿದವಳಲ್ಲ. ನನ್ನ ಸ್ಥಿತಿಯನ್ನು ಮರೆಮಾಚದೆ ವಿವರಿಸಿದೆ. "ಇಲ್ಲ ಅಪ್ಪಾವ್ರೆ, ನಾನವರಿಗೆ ಮಾತು ಕೊಟ್ಟು ಬಿಟ್ಟಿದ್ದೀನಿ. ತಪ್ಪಿದರೆ ಅವರಿಗೂ ನಷ್ಟ, ನನಗೂ ಕೆಟ್ಟ ಹೆಸರು" ವೀರಣ್ಣನವರು ಒಪ್ಪುವ ಸ್ಥಿತಿಯಲ್ಲೇ ಇಲ್ಲ. 'ಹೇಗಾದರೂ ಬಂದು ಬಿಡಪ್ಪ' ಎಂದು ಮತ್ತೆ ಮತ್ತೆ ಪುಸಲಾಯಿಸಿದರು, ಮನವೊಲಿಸಲು ಯತ್ನಿಸಿದರು. 'ದಯಮಾಡಿ ಕ್ಷಮಿಸಿ ಅಪ್ಪಾವ್ರೆ ನಾನು ಅಲ್ಲಿಗೆ ಹೋಗಲೇಬೇಕು. ಈ ಅವಸ್ಥೆಯಲ್ಲಿ ನಿಮ್ಮಲ್ಲಿಗೆ ಖಂಡಿತಾ ಬರಲಾರೆ'. ನಾನು ಅದನ್ನೇ ಒತ್ತಿ ಒತ್ತಿ ಹೇಳಿದೆ. ವೀರಣ್ಣನವರಿಗೆ ಸಾಕಾಗಿರಬೇಕು. ಮುಂದೆ ಏನೂ ಹೇಳಲಿಲ್ಲ. ಈ ಘಟನೆಯಿಂದಾಗಿ ನಾನು ಅಂದು ಅಷ್ಟೇ ಅಲ್ಲ, ಮುಂದೆಂದೂ ಗುಬ್ಬಿ ಕಂಪನಿಯ ಕಲಾಬಳಗಕ್ಕೆ ಸೇರಲು ಆಗಲೇ ಇಲ್ಲ. ಕಡೆಗೂ ನನ್ನ ಆಸೆ ಈಡೇರಲೇ ಇಲ್ಲ. ಆದರೂ ಈ ಪ್ರಸಂಗ ಯಾವುದೇ ಅಪಾರ್ಥ, ಅಸಮಾಧಾನಕ್ಕೂ ಅವಕಾಶವಾಗಲಿಲ್ಲ. ಇದಕ್ಕೆ ಕಾರಣ ವೀರಣ್ಣನವರ ದೊಡ್ಡತನ.

ನನ್ನ ಸೌಭಾಗ್ಯವೆಂದರೆ ವೀರಣ್ಣನವರ, ಅವರ ಕುಟುಂಬದವರ ಆಪ್ತ ಬಳಗಕ್ಕೆ ನಾನು ಎಂದೋ ಸೇರಿ ಹೋಗಿದ್ದೆ. ಆ ಪ್ರೀತಿಯ ಜೀವ, ಅವರ ಬಂಧುಗಳು ಎಲ್ಲರೂ ನನ್ನನ್ನು ಸದಾ ವಿಶ್ವಾಸದಿಂದಲೇ ಕಂಡರು. 'ನಾಗಮ್ಮ ಯಾವತ್ತೂ ನಮ್ಮ ಮನೆಯವಳೇ' ಎನ್ನುತ್ತಿದ್ದರು. ಅವರ ಆತ್ಮೀಯತೆಗೆ ಪ್ರತಿಯಾಗಿ ನಾನೂ ಅವರಿಗೆ ನನ್ನ ಗೌರವ - ಮರ್ಯಾದೆಗಳನ್ನು ತೋರುತ್ತಲೇ ಬಂದೆ.

## ಸಿಂಹದ ಗುಹೆಯನ್ನು ಹೊಕ್ಕೆ

ಗುಬ್ಬಿ ಕಂಪನಿಯಲ್ಲಿದ್ದ ರಾಮಚಂದ್ರಶಾಸ್ತ್ರಿಗಳು 'ಮಂಜುನಾಥೇಶ್ವರ ಕೃಪಾ ಮಂಡಲಿ'ಯನ್ನು ೧೯೪೦ರಲ್ಲಿ ಹುಟ್ಟು ಹಾಕಿದರು. 'ಪ್ರಹ್ಲಾದ', 'ಕೃಷ್ಣಲೀಲೆ' ಗಳನ್ನು ಆಡುತ್ತಿದ್ದರು. ನಾನು ಈ ಕಂಪನಿಗೆ ಸೇರಿದೆ. ಒಂದೆರಡು ಕ್ಯಾಂಪ್‌ಗಳು ಯಶಸ್ವಿಯಾಗಿಯೇ ನಡೆದವು. ಆದರೆ ಶಾಸ್ತ್ರಿಗಳಿಗೋ ಸಿನಿಮಾ ಸೆಳೆತ ಪ್ರಬಲವಾಗಿತ್ತು. ಕಂಪನಿ ನಡೆದದ್ದು ಇಷ್ಟೇ ಸಾಕೆಂದು ಅವರು ಮದ್ರಾಸಿನತ್ತ ನಡೆದು ಬಿಟ್ಟರು. ನಾನು ಮರಳಿ ಮನೆಗೆ. ಅಲ್ಲಿ ಇಲ್ಲಿ ಹೊಸ, ಹೊಸ ಹವ್ಯಾಸಿ ಸಂಸ್ಥೆಗಳಲ್ಲಿ ಆಗೀಗ ಪಾತ್ರವಹಿಸಿ ದಿನ ದೂಡುತ್ತಿದ್ದೆ. ನನ್ನ, ಮನೆಯವರ ಬದುಕು ಸಾಗಿಸುತ್ತಿದ್ದೆ.

ಹೀಗೆ ಏರುಪೇರಿಲ್ಲದೆ ವರ್ಷವೆರಡು ಉರುಳಿದವು. ೧೯೪೨ರಲ್ಲಿ ಹೊಸ ಕಂಪನಿಯೊಂದು ಉದಯಿಸಿತು: ' ಅಂಬಾ ಸೆಲೆಕ್ಟ್ ಕಂಪನಿ'. ಮಾಲೀಕರು : ಹೆಚ್. ಎಲ್. ಎನ್. ಸಿಂಹ. ಆ ದಿನಗಳಲ್ಲೇ ಅವರು ಖ್ಯಾತ ಕಲಾವಿದ - ನಿರ್ದೇಶಕರು. ಅಲ್ಲದೆ ಸ್ವತಃ ನಾಟಕಕಾರರು. ಸಾಮಾಜಿಕ ನಾಟಕಗಳನ್ನು ಬರೆದು ರಂಗದ ಮೇಲೆ ತಂದ ಮೊದಲಿಗರು. 'ಸಂಸಾರ ನೌಕ', 'ಷಹಜಹಾನ್', 'ಪ್ರೇಮಲೀಲಾ', 'ಅಬ್ಬಾ ಆ ಹುಡುಗಿ', ಎಲ್ಲಾ ಅವರ ಕಲ್ಪನೆಯ ಕೂಸುಗಳೇ. ಕನ್ನಡ ರಂಗಭೂಮಿಗೆ ಈ ಸಾಮಾಜಿಕಗಳಿಂದ ಹೊಸ ತಿರುವೇ ಸಿಕ್ಕಿತು. ಆಗ ಮೇಲುಗೈ ಆಗಿದ್ದ ಪೌರಾಣಿಕಗಳನ್ನೂ ಅವರು ಕೈ ಬಿಟ್ಟವರಲ್ಲ. ಆಗಾಗ 'ಪ್ರಹ್ಲಾದ ಚರಿತೆ'ಯಂಥ ನಾಟಕಗಳನ್ನು ಕಟ್ಟುತ್ತಿದ್ದರು. ಒಟ್ಟಿನಲ್ಲಿ ನಾಟಕಗಳ ಮೂಲಕ ಪಾಮರ, ಪಂಡಿತ, ಪದವೀಧರೆಲ್ಲರನ್ನೂ ಮುಟ್ಟುವ - ತಟ್ಟುವ ಇಷ್ಟ ಅವರದು. ಸಿಂಹರೊಂದಿಗೆ ಥಿಕ್ಕಿ ಮಾಧವರಾಯರು, ರಾಮಚಂದ್ರ ಶಾಸ್ತ್ರಿಗಳು, ಸೋರಟ್ ಅಶ್ವತ್ಥರೂ ಜೊತೆಗೂಡಿದರು. ಎಲ್ಲರೂ ಪೀರ್ ಸಾಹೇಬರ ಕಂಪನಿಯಲ್ಲಿದ್ದ ಗೆಳೆಯರೇ. ಅವರಿಗೆಲ್ಲ ಸಿನಿಮಾದ ಸಂಪರ್ಕ, ಸೆಳೆತ ಸಾಕಷ್ಟಿತ್ತಾದರೂ ನಾಟಕವನ್ನು ಬಿಡಲಾರದವರಾಗಿದ್ದರು. ಈ ಬಳಗದಲ್ಲಿ ನಾನೂ ಒಬ್ಬಳಾದೆ.

ನಾನು ನಾಟಕರಂಗ ಸೇರಿದ್ದಕ್ಕೆ ಧನ್ಯತಾ ಭಾವ ಮೊಟ್ಟ ಮೊದಲ ಬಾರಿಗೆ ಮೂಡಿ ಬಂದದ್ದು ತಾಯೂರು ಕ್ಯಾಂಪಿನಲ್ಲಿ. ನಂಜನಗೂಡು ಸಮೀಪದ ಈ ಊರಿನಲ್ಲಿ ಸಿಂಹರ

ಕಂಪನಿಯ ಕ್ಯಾಂಪ್. 'ಪ್ರಹ್ಲಾದ ಚರಿತೆ' ಜನಪ್ರಿಯತೆಗೂ, ಧನಗಳಿಕೆಗೂ ಕಾರಣವಾಗಿತ್ತು. ನಾನು ಕಯಾದು, ಧಿಕ್ಕಿ ಅವರು ಹಿರಣ್ಯಕಶಿಪು. ಗುರುವಿನಂತೆ ಸಂಗೀತಾಭಿನಯಗಳನ್ನು ನನಗೆ ಅರೆದು ಕುಡಿಸಿದರು, ಅವರು. ನಾಟಕ ಚೆನ್ನಾಗಿ ಮೂಡಿಬಂದು ಜನಕ್ಕೆ ಮೋಡಿ ಹಾಕಿತು.

ಆ ಕಾಲಕ್ಕೆ ಸಮಾಜ, ನಾಟಕದವರನ್ನು ಕಡೆಗಣ್ಣಿನಿಂದಲೇ ನೋಡುತ್ತಿತ್ತು. ಸಂಜೆಯಾದೊಡನೆ ಮನರಂಜನೆ ನೀಡಲು ನಾವೇ ಬೇಕು. ಆದರೂ ನಾಟಕದವರೆಂದರೆ ಏನೋ ಒಂದು ಬಗೆಯ ಕುಹಕ - ಕುಚೇಷ್ಟೆ; ಕ್ಷುಲ್ಲಕ ಭಾವ- ಕುತ್ಸಿತ ನಡೆ. ಅದಕ್ಕೆಲ್ಲ ಒಗ್ಗಿ ಹೋಗಿ ನಾವು ಜಡವೇ ಆಗಿಬಿಟ್ಟಿದ್ದೆವೆನ್ನಿ. 'ಕೆಲಸವೇ ಕೈಲಾಸ- ಕಾಯಕದಿಂದಲೇ ಕೈ ತುತ್ತು' ಎಂದು ನಂಬಿ, ನೆಚ್ಚಿ ನಾಟಕಕ್ಕೆ ನಮ್ಮನ್ನು ನಾವು ಅರ್ಪಿಸಿಕೊಂಡು ಬಿಟ್ಟಿದ್ದೆವು. ಅಂಥ ಕಾಲದಲ್ಲಿ ಆ ಊರಿನ ಜನ ನಮಗೆ ಸ್ನೇಹದ ಹುಚ್ಚು ಹಿಡಿಸಿದರು. ಪ್ರೀತಿಯ, ಅಭಿಮಾನದ ರುಚಿ ತೋರಿಸಿದರು- ಅವು ತಾಯೂರಿಗೆ ತುಂಬಾ ಹೆಸರು ತಂದಿದ್ದ 'ತಟ್ಟೆ ಇಡ್ಲಿ' ಯಷ್ಟೇ ತಾಜಾ ಮತ್ತು ಸವಿಯಾಗಿದ್ದವು. ದಿನ ಬೆಳಗಾಯಿತೆಂದರೆ ಸಾಕು. ಬುಟ್ಟಿ ಗಟ್ಟಲೆ ಹಬೆಯಾಡುವ ಹದವಾದ ಇಡ್ಲಿ, ಸೇರಿನಷ್ಟು ಹಸನಾದ ಹೊಸ ಬೆಣ್ಣೆ, ಸವಿಯಾದ ಹಸಿಕೊಬ್ಬರಿಯ ಹಸಿರು ಚಟ್ನಿ ನಾಟಕದ ಮನೆಗೆ ತಪ್ಪದೆ ಪುಕ್ಕಟೆಯಾಗಿ ಸರಬರಾಜಾಗುತ್ತಿತ್ತು. ಕೆಲ ಹೊತ್ತಿನಲ್ಲಿಯೇ ಖಾಲಿಯೂ ಆಗುತ್ತಿತ್ತು. ನಾವು ಹೊರ ಹೊರಟಾಗೆಲ್ಲ ಹಾಲು - ಹಣ್ಣುಗಳ ಉಪಚಾರ, ಹೆಂಗಳೆಯರಿಗೆ ಹೂ ದಂಡೆ. ಹೋದಲ್ಲಿ - ಬಂದಲ್ಲಿ ಆದರದ ಮಾತುಕತೆ, ಕ್ಷೇಮ- ಸಮಾಚಾರ, ಕುಶಲೋಪರಿ. ನಮ್ಮ ಕುಟುಂಬ, ನಾಟಕ ಜೀವನದ ಬಗ್ಗೆ ಕುತೂಹಲದ ಪ್ರಶ್ನೋತ್ತರ.

ನಾವು ಕ್ಯಾಂಪ್ ಮುಗಿಸಿ ಹೊರಟು ನಿಂತಾಗಲಂತೂ ಪ್ರತಿ ಮನೆಯವರಿಂದಲೂ ನಮಗೆಲ್ಲ ಕೈಲಾದ ಮಟ್ಟಿಗೆ ಸತ್ಕಾರ, ಸನ್ಮಾನ- ಸಿಹಿಯೌತಣ. ಫಲಪುಷ್ಪ, ಮಂಗಳದ್ರವ್ಯಗಳ ಬಾಗಿನ. ನನಗೋ ಕಲಾಪತ್ತಿನ ಖಣಗಳ ಕೊಡುಗೆ. ಮನದುಂಬಿ ಆಶೀರ್ವಾದ, ಶುಭಾಶಯ. ನಾನು ಮುಂದೆ ಹಲವಾರು ವರ್ಷ ರವಿಕೆಗಾಗಿ ಖಣಗಳನ್ನು ಕೊಳ್ಳಬೇಕಾದ ಪ್ರಸಂಗವೇ ಬರಲಿಲ್ಲ! ನಮ್ಮನ್ನೆಲ್ಲ ಊರ ಬಾಗಿಲವರೆಗೂ ಬಂದು ಬೀಳ್ಕೊಟ್ಟರು. ಎಲ್ಲರ ಕಣ್ಣುಗಳೂ ತೇವ. ತಾಯೂರು ನನ್ನ ಪಾಲಿಗಂತೂ ನಿಜಕ್ಕೂ ತಾಯಿಯೂರು- ತವರೂರು ಆಗಿಬಿಟ್ಟಿತು. ಜನಮನ್ನಣೆ ಅಪಾರ, ಆದರೂ ಹಣ ಸಂಪಾದನೆ ಮಾತ್ರ ಅಲ್ಪವೇ! ಆ ಕಾಲದಲ್ಲೇ ಹಾಗೆ, ಹಣಕಾಸಿನ ಓಡಾಟ- ವಹಿವಾಟು ಕಡಿಮೆಯೇ. ಹೀಗಾಗಿ ಕಂಪನಿಯ ಕ್ಯಾಂಪ್ ತಾಯೂರಿನಿಂದ ಬೇಗನೇ ಕಾಲ್ತೆಗೆಯಬೇಕಾಯಿತು.

ಬೆಂಗಳೂರಿನಲ್ಲಿ ಮುಂದಿನ ಮೊಕ್ಕಾಂ. ಪ್ರಾಕ್ಟೀಸಿಗೆಂದು ಚಾಮರಾಜಪೇಟೆಯಲ್ಲೊಂದು ಬಾಡಿಗೆ ಮನೆ. ಎರಡು ತಿಂಗಳು ಪೂರಾ'ಅಬ್ಬಾ ಆ ಹುಡುಗಿ' ಮತ್ತು 'ಸಂಸಾರ ನೌಕ' ಇವುಗಳ ಎಡೆಬಿಡದ ತಾಲೀಮು. ನನ್ನದು ಕ್ರಮವಾಗಿ ಬಜಾರಿ ಹಾಗೂ ಸರಳೆಯ ಪಾತ್ರ. 'ಸಂಸಾರ ನೌಕ'ದಲ್ಲಿ ನಾಯಕಿ ಸರಳ ಜೀವನದಲ್ಲಿ ಜಿಗುಪ್ಸೆ ಬಂದು ನೇಣು ಹಾಕಿಕೊಳ್ಳುವ ಸನ್ನಿವೇಶವಿದೆ. ಶಿಸ್ತಿನ ಸೇನಾಧಿಪತಿ ಸಿಂಹ ಅವರು ಇದರ ಅಭ್ಯಾಸವನ್ನು ನನಗೆ ಎಷ್ಟೆಷ್ಟು ಬಾರಿ ಮಾಡಿಸಿದರೋ? ನನಗಂತೂ, ಅದರಿಂದ ನಿಜವಾಗಿ ಜಿಗುಪ್ಸೆಯೇ ಹುಟ್ಟಿಬಿಟ್ಟಿತ್ತು. ಇಷ್ಟಾದರೂ ಕಾರಣಾಂತರದಿಂದ ಆ ನಾಟಕ ಆಗ ರಂಗದ ಮೇಲೆ ಪ್ರಯೋಗಗೊಳ್ಳಲೇ ಇಲ್ಲ! ಸಿಂಹರಿಗೆ ಸಿನಿಮಾ ರಂಗದಿಂದ ತುರ್ತು ಕರೆ ಬಂತು. ಅವರು ಇದ್ದಕ್ಕಿದ್ದ ಹಾಗೆ ಮದ್ರಾಸಿಗೆ ಹೊರಟೇ ಬಿಟ್ಟರು. ಆದರೆ ಸಿಂಹರು ನನಗೆ ಕೊಟ್ಟ ತರಬೇತಿ- ತಯಾರಿಯೇನೂ ದಂಡವಾಗಲಿಲ್ಲ. ಮುಂದೆ ಅನೇಕ ಕಂಪನಿಗಳು ' ಸಂಸಾರ ನೌಕ' ವನ್ನು ಹಲವಾರು ಬಾರಿ ಆಡಿದವು. ಅವುಗಳಲ್ಲೆಲ್ಲಾ ನಾನೇ 'ಸರಳ'. ನನಗೆ ಒಳ್ಳೆಯ ಹೆಸರು ತಂದು ಕೊಟ್ಟ ಪಾತ್ರ ಅದು.

ಚಲನಚಿತ್ರರಂಗಕ್ಕೆ ಹೋದರೂ, ಸಿಂಹರಿಗೆ ನಾಟಕದ್ದೇ ಚಪಲ. ಹೀಗಾಗಿ ಅವರದು ಅಲ್ಲೊಂದು ಕಾಲು, ಇಲ್ಲೊಂದು ಕಾಲು. ಚಿತ್ರರಂಗ ಸ್ವಲ್ಪ ಕಾಲಾವಕಾಶ ಕೊಟ್ಟರೂ ಇಲ್ಲಿಗೆ ಧಾವಿಸಿ ಬಂದು ಒಂದಾದರೂ ನಾಟಕವನ್ನು ಆಡಿಸಿಯೇ ಬಿಡುತ್ತಿದ್ದರು. ಹೀಗೇ ಒಮ್ಮೆ ದಾವಣಗೆರೆಯಲ್ಲಿ ಮೊಕ್ಕಾಂ ಹಾಕಿದರು. ನಟಭಯಂಕರ ಗಂಗಾಧರರಾಯರು ಮತ್ತು ಚಿನ್ನಪ್ಪರನ್ನು ಕರೆಸಿದರು. ಅದ್ದೂರಿಯಾಗಿ 'ಕೃಷ್ಣಲೀಲೆ' ಆಡಿಸಿದರು. ತಾವೇ ನಾಯಕನಾಗಿ 'ಷಹಜಹಾನ್' ನಾಟಕ ಆಡಿಸಿದರು. ಅದರಲ್ಲಿ ಹುಣಸೂರರದು 'ಧಾರಾ' ಪಾತ್ರ. ನಾನು ಷಹಜಹಾನನ ಮಗಳು ಬಜಾರಿ 'ಜಹನಾರಾ'.

ಸಿಂಹ, ಹೆಸರಿಗೆ ತಕ್ಕ ಹಾಗೆ ಸಾಹಸಶೀಲರು. ಹೊಸತನಕ್ಕಾಗಿ ಸದಾ ತಹತಹಿಸುತ್ತಿದ್ದವರು. ಪಟ್ಟು ಹಿಡಿದರೆ ಬಡಪಟ್ಟಿಗೆ ಬಿಡುವವರಲ್ಲ. ಒಮ್ಮೆ ಶಿವರಾತ್ರಿಗೆ ಇನ್ನೇನು ಎರಡೇ ದಿನವಿದೆ. ಆ ದಿನ 'ಕಬೀರ್ ದಾಸ್' ಆಡಬೇಕೆಂದು ತೀರ್ಮಾನಿಸಿಯೇ ಬಿಟ್ಟರು. ಅಭ್ಯಾಸವೇನು, ಎಂತು ಎಂದು ಯೋಚಿಸಲೇ ಇಲ್ಲ. ಪುರುಷ ಪಾತ್ರಧಾರಿಗಳಿಗೇನೋ, ಅಷ್ಟೊ-ಇಷ್ಟೊ ಮಾತುಗಳು ಬಾಯಿಪಾಠವಾಗಿದ್ದವು. ಆದರೆ ನಟಿಯರಾದ ನಾನು, ತುಳಸಮ್ಮ, ಎಸ್.ಕೆ.ಪದ್ಮಾರಿಗಂತೂ ಎಳ್ಳಷ್ಟೂ ಅಭ್ಯಾಸವಾಗಿರಲಿಲ್ಲ. ನನ್ನದು ಕಬೀರನ ಪತ್ನಿ ಬೀಬಿಯ ಪಾತ್ರ. ಮೊದಲಿಂದ ಕೊನೆಯವರೆಗೂ ಬರುವ ಪ್ರಧಾನ ಪಾತ್ರ. ಒಬ್ಬೊಬ್ಬರೂ ಒಂದೊಂದು ಮೂಲೆ ಹಿಡಿದೆವು. ಬೆಳಗಿನಿಂದ ನಡುರಾತ್ರಿಯವರೆಗೂ ಕಂಠಪಾಠಮಾಡಿದ್ದೇ ಮಾಡಿದ್ದು. ಈಗ ನೆನೆದರೂ ನನಗೆ ಅಚ್ಚರಿಯಾಗುತ್ತದೆ. ನಮಗೆಲ್ಲ ಆಗ ಎಷ್ಟೊಂದು ಸಹನೆ - ಸ್ಮರಣಸಾಮರ್ಥ್ಯ ಇತ್ತೆಂದು. ಒಂದು - ಒಂದೂವರೆ ದಿನದಲ್ಲೇ ಎಲ್ಲ ಹಾಡು - ಮಾತುಗಳನ್ನು ಕಂಠಗತ ಹೃದ್ಗತ ಮಾಡಿಕೊಂಡು ಬಿಟ್ಟಿದ್ದೆವು. ನಾಟಕವೂ ನಡೆಯಿತು.

ಚೆನ್ನಾಗಿಯೇ ಬಂತು ಎಂದು ಬೇರೆ ಹೇಳಬೇಕಿಲ್ಲ. ಅಂಥ ಸ್ಫೂರ್ತಿಯ ಮೂರ್ತಿ ಸಿಂಹ ಅವರು. ಒಟ್ಟಿನಲ್ಲಿ ಸಿಂಹದ ಗುಹೆಯನ್ನೇ ಸೇರಿ ಸಾಕಷ್ಟು ಸಾಹಸ ತೋರಿ ಸಿಂಹರಿಂದಲೇ ಸೈ ಎನಿಸಿಕೊಂಡೆ. ಇದು ನನ್ನ ಪುಣ್ಯದ ಫಲ.

ಸಿಂಹರಿಗೆ ಸಹನೆ ತುಂಬಾ ಕಡಿಮೆ. ಮನಸ್ಸಿಗೆ ಬಂದು ಬಿಟ್ಟರೆ ತೀರಿತು. ಬೇರಾರ ಸಲಹೆ, ಸೂಚನೆಗಳಿಗೂ ಅವರ ಮನ್ನಣೆ ಇರದು. ದಾವಣಗೆರೆ ಕ್ಯಾಂಪಿನಲ್ಲಿ ಕಲೆಕ್ಷನ್ ಸರಿಯಾಗಿ ಆಗಲಿಲ್ಲ. ದಿಢೀರನೆ ಕಂಪನಿ ಮುಚ್ಚಿ, ತಾವು ಮದ್ರಾಸಿಗೆ ನಡೆದೇ ಬಿಟ್ಟರು. ನಮಗೆಲ್ಲ ಮತ್ತೆ ಪರದಾಟ. ಬೇರೆ ಬೇರೆ ಕಂಪನಿಗಳತ್ತ ಅಲೆದಾಟ. ಸೂಕ್ತ ಅವಕಾಶ- ನೆಲೆ ಸಿಗುವವರೆಗೂ ಪ್ರಾಣಸಂಕಟ!

## ಕೈ ಬೀಸಿ ಕರೆಯಿತು, ಬೆಳ್ಳಿತೆರೆಯ ಬೆರಗಿನ ಲೋಕ

೧೯೪೩ರಲ್ಲಿ ಒಂದು ದಿನ. ಸಿಂಹರ ಆಪ್ತ ಸ್ನೇಹಿತ ಶೇಷಾಚಾರ್ ನಮ್ಮ ಮನೆಗೆ ಅನಿರೀಕ್ಷಿತವಾಗಿ ಬಂದಿಳಿದರು. ಸಿನಿಮಾ ಸೇರಲು ನಾನು ಮದ್ರಾಸಿಗೆ ಬರಬೇಕೆಂಬ ಸಿಂಹರ ಸಂದೇಶ ತಂದಿದ್ದರು. ಆ ಕ್ಷೇತ್ರಕ್ಕೆ ಕಾಲಿರಿಸಲು ನನಗೆ ಏನೋ ಅಂಜಿಕೆ, ಯಾಕೋ ಹಿಂಜರಿಕೆ. ಆದರೂ ಶೇಷಾಚಾರ್ ನನ್ನ ಸಂಕೋಚವನ್ನು ತಗ್ಗಿಸಿ, ಸಂದೇಹವನ್ನು ಕುಗ್ಗಿಸಿ ತಮ್ಮೊಡನೆಯೇ ಮದ್ರಾಸಿಗೆ ಕರೆದೊಯ್ದರು. ಅಲ್ಲಿ 'ಕೃಷ್ಣ- ಸುದಾಮ' ಚಿತ್ರೀಕರಣ ನಡೆದಿತ್ತು. ಸಿಂಹರು ನಿರ್ದೇಶಕ ಸುಬ್ರಹ್ಮಣ್ಯ ಅಯ್ಯರರಿಗೆ ನನ್ನನ್ನು ಪರಿಚಯ ಮಾಡಿಸಿದರು. ನನಗೆ ರುಕ್ಮಿಣಿ ಪಾತ್ರ ದೊರೆಯಿತು. ಕೃಷ್ಣನ ಪಾತ್ರಧಾರಿ ಎಸ್. ಡಿ. ಸುಬ್ಬಲಕ್ಷ್ಮಿ ಎಂಬಾಕೆ. ಆ ಕಾಲದ ಹೆಸರಾಂತ ನಟಿ ಹಾಗೂ ಗಾಯಕಿ.

ಚಿತ್ರದಲ್ಲಿ ಪಾತ್ರ ಮಾಡುವುದು ಒಂದು ವಿಚಿತ್ರ ಅನುಭವವೇ ಆಗಿಬಿಟ್ಟಿತು. ಚಿತ್ರೀಕರಣ ಪೂರ್ಣವಾದ ಮೇಲೆ ಸಂಭಾಷಣೆಗಳನ್ನು ಜೋಡಣೆ ಮಾಡುವ ಡಬ್ಬಿಂಗ್ ತಂತ್ರಜ್ಞಾನ ಆಗಿನ್ನೂ ಬೆಳೆದಿರಲಿಲ್ಲ. ಹೀಗಾಗಿ ಪಾತ್ರ ಮಾಡ ಮಾಡುತ್ತಲೇ ಮಾತೂ ಆಡಬೇಕು, ಹಾಡೂ ಹಾಡಬೇಕು. ನಾನೂ, ತುಳಸಮ್ಮನವರೂ ಯುಗಳ ಗೀತೆಯೊಂದನ್ನು ಹಾಡಿದೆವು. ಅವರೊಂದು ನುಡಿ, ನಾನೊಂದು ನುಡಿ. ಹೀಗೆ ಅಭಿನಯ, ಹಾವ - ಭಾವ ಸಹಿತ ಹಾಡಿದ್ದಾಯಿತು. ಎಲ್ಲರೂ ಮೆಚ್ಚಿಕೊಂಡರು ಕೂಡಾ. ಆದರೂ ಅದೊಂದು ಶ್ರಮಸಾಧ್ಯವಾದ ಕೆಲಸವೇ ಆಗಿತ್ತು. ಅದೇ ಈಗ ನೋಡಿ. ಎಷ್ಟೊಂದು ಸಲೀಸು, ಸುಲಭ. ನಟ ಅಥವಾ ನಟಿ ತುಟಿ ಚಲನೆಯೊಂದಿಗೆ ನಟನೆ ಮಾತ್ರ ಮಾಡುತ್ತಾರೆ. ಮುಂದೆಂದೋ ಒಂದು ದಿನ ಮುದ್ರಣಕ್ಕಾಗಿ ಧ್ವನಿ ನೀಡುತ್ತಾರೆ.

ಇಲ್ಲವೇ ಅವರಿಗಾಗಿ ಕಂಠದಾನ ಮಾಡುವವರೇ ಮತ್ತೊಬ್ಬರು. ಇನ್ನು ಅವರಿಗಾಗಿ ಹಾಡುವವರಂತೂ ಬೇರೆಯೇ ಹಿನ್ನೆಲೆ ಗಾಯಕರು. ಒಟ್ಟಿನಲ್ಲಿ ನಾನು ಹಠಾತ್ತಾಗಿ ಚಿತ್ರದಲ್ಲಿ ಪಾತ್ರ ಮಾಡಿದ್ದು, ಮಾತಾಡಿ ಹಾಡಿದ್ದು ಎಲ್ಲವೂ ಚಲನ ಚಿತ್ರದಂತೆಯೇ ನಡೆದು ಹೋಯಿತು. ನೆನೆಸಿಕೊಂಡರೇ ನಗು ಬರುತ್ತದೆ. ಬೆರಗಾಗಿ ಬಿಡುತ್ತೇನೆ. 'ಕೃಷ್ಣ ಸುದಾಮ' ದ ನಂತರ ಎಂ. ವಿ. ರಾಜಮ್ಮನವರ ' ರಾಧಾರಮಣ' ಚಿತ್ರಕ್ಕಾಗಿ ಮತ್ತೊಮ್ಮೆ ಮದ್ರಾಸಿಗೆ

ಹೋದೆ. ನಾನದರಲ್ಲಿ ಗೋಪಿಕಾಸ್ತ್ರೀ. ಬಾಲಕೃಷ್ಣ, ಸೋರಟ್ ಅಶ್ವತ್ಥ, ಬಿ. ಆರ್. ಪಂತುಲು ಅವರೆಲ್ಲಾ ಸಹಕಲಾವಿದರು. ಏತನ್ಮಧ್ಯೆ ಪಂತುಲು ಅವರೊಡನೆ ಮದ್ರಾಸ್ ಆಕಾಶವಾಣಿಯಲ್ಲಿ ನಾಟಕವೊಂದನ್ನೂ ಮಾಡಿದೆ.

ಅಂತೂ - ಇಂತೂ ಸಿಂಹರ ಸಹವಾಸದಿಂದ ಸಿನಿಮಾ ಜಗತ್ತಿನ ಸಂಪರ್ಕ, ಸ್ನೇಹವಾಯಿತು. ಇದರಿಂದ ನನಗಾದ ದೊಡ್ಡ ಲಾಭವೆಂದರೆ- ಚಿತ್ರರಂಗದ ಯಂತ್ರ- ತಂತ್ರಗಳು, ಈ ರಂಗದ ಥಳುಕು- ಹುಳುಕು, ಒಳಿತು- ಕೆಡಕು ಇವೆಲ್ಲವನ್ನೂ ಹತ್ತಿರದಿಂದ ನೋಡಿದ್ದು. ರಂಗಭೂಮಿ - ಸಿನಿಮಾಗಳ ನಡುವಣ ನಿಜವಾದ ಅಂತರ ಅರಿವಾಯಿತು. ನನ್ನ ಅಭಿನಯವನ್ನು ಮೆಚ್ಚಿದ್ದ ಪಂತುಲು ಮದ್ರಾಸಿನಲ್ಲೇ ನೆಲೆ ನಿಂತು ಸಿನಿಮಾದಲ್ಲೇ ಪಾತ್ರ ಮಾಡಲು ನನ್ನನ್ನು ಒತ್ತಾಯಿಸಿದರು. ಹಲವಾರು ಅವಕಾಶಗಳನ್ನು ಕೊಡಿಸುವ ಭರವಸೆಯನ್ನು ನೀಡಿದರು. ಆದರೆ ನನಗೇನೋ ಅದು ಒಪ್ಪಿತವಾಗಲಿಲ್ಲ. ನಾಟಕದತ್ತಲೇ ನನ್ನ ಒಲವು. ರಂಗದ ಮೇಲೆ ಮಾತ್ರ ನಮ್ಮ ಪೂರ್ಣ ಹಾಗೂ ನೈಜ ಪ್ರತಿಭೆಯನ್ನು ಮೆರೆಯಲು ಸಾಧ್ಯ ಎಂಬುದು ಆಗಲೂ, ಈಗಲೂ ನನ್ನ ನಿಲುವು. ಚಲನಚಿತ್ರಗಳಲ್ಲಿ ಮುಂದುವರಿದಿದ್ದರೆ ಹಣ - ಹೆಸರು ಹೆಚ್ಚಾಗಿಯೇ ಬರುತ್ತಿತ್ತೇನೋ? ಆದರೆ ರಂಗಭೂಮಿಯಿಂದ ನಾನು ಗಳಿಸಿರುವ ತೃಪ್ತಿ, ಕೀರ್ತಿಗಳಿಗೆ ಮಿಗಿಲಾದುದು ಮತ್ತಾವುದೂ ಇಲ್ಲ. ಇದು ನನ್ನ ಗಟ್ಟಿ ನಂಬಿಕೆ.

ರಂಗವೇ ನನಗೆ ತವರು ಮನೆ. ತಾಯಿಯ ಒಡಲು, ಮಮತೆಯ ಮಡಿಲಿನಂತೆ ಹಿತವಾದ ತಾಣ. ಹಾಗೆಂದೇ 'ರಾಧಾರಮಣ' ಮುಗಿಸಿದೊಡನೆಯೇ ರಂಗಶಾಲೆಗೆ ಹಿಂತಿರುಗಿದೆ. ಚಾಮುಂಡೇಶ್ವರಿಗೆ ಮರಳಿದೆ. ಆದರೆ ಈ ವೇಳೆಗೆ ಅಲ್ಲಿ ಸೋನಾ ಬಾಯಿ, ಲಕ್ಷಮ್ಮನಂತಹ ಅನೇಕ ಪ್ರಮುಖ ನಟಿಯರು ತಯಾರಾಗಿ ತಳವೂರಿದ್ದರು. ನನಗೆ ಅವಕಾಶಗಳು ಮಿತವಾದುವು. ನಿಂತ ನೀರಾಗಲು ನಾ ಬಯಸಲಿಲ್ಲ. ಹೊಸ ನೆಲೆಗೆ ಹಾರಲು ಹಾತೊರೆದ ಹಕ್ಕಿ ನಾನಾದೆ.

## ಮಿತ್ರ ಮಂಡಲಿಯೊಡನೆ ಮೈತ್ರಿ

ಪಾತ್ರೆ ಅಂಗಡಿ ಇಟ್ಟುಕೊಂಡಿದ್ದ ಅಣ್ಣಯ್ಯಪ್ಪ ಎಂಬುವರು ನಮ್ಮ ಕುಟುಂಬ ಹಿತೈಷಿಗಳಾಗಿದ್ದವರು. ಅವರು 'ಕಲ್ಚರ್ಡ್ ಕಮೆಡಿಯನ್' ಎಂದು ಪ್ರಸಿದ್ಧರಾಗಿದ್ದ ದಿ||ಹಿರಣ್ಣಯ್ಯನವರ ಆಪ್ತರು. ಹಿರಣ್ಣಯ್ಯನವರಾದರೋ ಬಲು ಬಡತನದಲ್ಲಿ ಬೆಳೆದು ಮುಂದೆ ಬಂದವರು. ಸ್ವಂತ ಪ್ರತಿಭೆ, ಸ್ವಸಾಮರ್ಥ್ಯ, ಸ್ವಾವಲಂಬನೆಗೆ ಹೆಸರಾಗಿದ್ದವರು. ಗುಬ್ಬಿ ಕಂಪನಿಯಲ್ಲಿ ಬೋರ್ಡು ಬರೆಯುತ್ತಲೇ ಬಣ್ಣ ಬಳಿದುಕೊಂಡು ತಮ್ಮ ಕಲಾವಂತಿಕೆಯನ್ನೂ, ಪೆನ್ನು ಹಿಡಿದು ಕೊಂಡು ಸಾಹಿತ್ಯ ಸೃಷ್ಟಿಯನ್ನೂ ಬೆಳೆಸಿಕೊಂಡವರು. ಮದ್ರಾಸಿಗೆ ಹೋಗಿ ತೆಲುಗು' ಅಲಿಬಾಬಾ ಮತ್ತು ಕಳ್ಳರು' ಚಿತ್ರದಲ್ಲೂ ನಟಿಸಿ ಹೆಸರು ಗಳಿಸಿ ಮೈಸೂರಿಗೆ ಮರಳಿದ್ದರು.

ಅಣ್ಣಯ್ಯಪ್ಪನವರ ಒತ್ತಾಸೆಯಿಂದ ನಾನು 'ಹಿರಣ್ಣಯ್ಯ ಮಿತ್ರ ಮಂಡಳಿ' ಗೆ ೧೯೪೪ ರಲ್ಲಿ ಸೇರಿದೆ. ಆಗ ಮಂಡಲಿಯ ಇತರ 'ಮಿತ್ರ' ರೆಂದರೆ ಗೋಪಾಲ್, ಎಂ. ಆರ್. ಪಾರ್ಥಸಾರಥಿ, ಶೇಷಾಚಾರ್ ಮತ್ತು ಬ್ಯಾಟರಿ ಸುಬ್ಬಣ್ಣನವರು. ಹಿರಣ್ಣಯ್ಯನವರೇ ರಚಿಸಿ ಆಡಿಸುತ್ತಿದ್ದ 'ರಾಮರಾಜ್ಯ'ದಲ್ಲಿ ನಾನು ಕೈಕೇಯಿ, ಇದರಿಂದ ನನಗೆ ಒಳ್ಳೇ ಹೆಸರು ಬಂತು, ಹಿರಣ್ಣಯ್ಯನವರಿಗೆ ಹಿಗ್ಗು ತಂದಿತು. ಅವರೇ ಬರೆದ 'ದೇವದಾಸಿ'ಯಲ್ಲಿ ನನಗೆ ವಿಮಲೆಯ ಪಾತ್ರ. ಅದರ ದೃಶ್ಯವೊಂದರಲ್ಲಿ ಮಣಿಮಂಜರಿಯ ಮನೆ ಎಲ್ಲಿದೆ?ಎಂದು ಪಾತ್ರವೊಂದು ಪ್ರಶ್ನಿಸುತ್ತದೆ. ಆಗ "ಅವಳ ಮನೆಯೊಂದು ದೊಡ್ಡ ದೇವಾಲಯ. ಅದನ್ನು ಕಂಡರಿಯದ ಭಕ್ತರೇ ಇಲ್ಲ. ಆ ಕೆಂಪು ಬಣ್ಣದ ಮಂದಿರವೇ ಆಕೆಯ ಭದ್ರ ಮಂದಿರವು" ಎಂಬುದು ನನ್ನ ಮಾತು. ನಾಟಕೀಯವಾಗಿ ಹಾವ - ಭಾವ ಸಹಿತ ಅದನ್ನು ನಾನು ಹೇಳುತ್ತಿದ್ದ ಒನಪು ಒಯ್ಯಾರದ ವೈಖರಿಗಾಗಿ ಚಪ್ಪಾಳೆಯ ಸುರಿಮಳೆ! ನಾಯಕಿ ಮಣಿಮಂಜರಿಯ ಪಾತ್ರಧಾರಿ ಬಳ್ಳಾರಿ ಲಲಿತಮ್ಮನವರಿಗಿಂತ ಒಮ್ಮೊಮ್ಮೆ ನನಗೇ ಹೆಚ್ಚು ಹೆಸರು, ಹೊಗಳಿಕೆ ಸಿಗುತ್ತಿತ್ತು.

ಹಿರಣ್ಣಯ್ಯನವರ ಆಪ್ತ ಮಿತ್ರ ಎಂ. ಆರ್. ಪಾರ್ಥಸಾರಥಿ ಆಗ ಮಂಡಲಿಯ ಪ್ರಾಕ್ಟೀಸ್ ಮ್ಯಾನೇಜರ್ ಮತ್ತು ಮುಖ್ಯ ಕಲಾವಿದರು. ವೀಣೆ ಶೇಷಣ್ಣನವರ ಶಿಷ್ಯರು.

ನಾಟಕ - ನಟನೆಗಳ ಮೇಲಿನ ಒಲವಿನಿಂದ ಬಾಲ್ಯದಲ್ಲೇ ಓದು ನಿಲ್ಲಿಸಿ ರಂಗಭೂಮಿಯ ಮಡಿಲಿಗೆ ಬಿದ್ದಿದ್ದರು. ಲಲಿತಮ್ಮನವರನ್ನು ಕರೆತಂದು, ಕನ್ನಡ ಕಲಿಸಿ, ನಟನೆಯನ್ನು ಹೇಳಿಕೊಟ್ಟಿದ್ದವರೂ ಅವರೇ. ತುಂಬಾ ಸರಳ ಹೃದಯಿ - ಸ್ನೇಹ ಜೀವಿ - ಸಹಾಯ ಶೀಲರು. ಹೀಗಾಗಿ ಅವರೊಡನೆ ನನಗೆ ಸ್ನೇಹ, ಸಲಿಗೆ ಬೆಳೆಯಿತು. ನಾನರಿಯದಂತೆಯೇ ಅವರ ವ್ಯಕ್ತಿತ್ವಕ್ಕೆ ಮಾರು ಹೋಗಿದ್ದೆ. ಅವರು ನನ್ನ ಮನ ಸೂರೆಗೊಂಡಿದ್ದರು.

ಪಾರ್ಥರು ಆ ಕಾಲದ ಹೆಸರಾಂತ ಹಾಸ್ಯ ಪಾತ್ರಧಾರಿಗಳಲ್ಲೊಬ್ಬರು. ಅಲ್ಲದೆ ಅವರದು ಸುಮಧುರ ಕಂಠಸಿರಿ. ಸಂಗೀತದಲ್ಲಿ ಅಪರಿಮಿತ ಪರಿಶ್ರಮ. ಹಾಗಾಗಿ ಪ್ರಾವೀಣ್ಯತೆ, ಪರಿಣತಿ. ನಾಟಕಗಳಲ್ಲಿ ತಮ್ಮೆಲ್ಲ ಹಾಡುಗಳಿಗೆ ಅವರದೇ ತಾಳ, ಪಟ್ಟು. ಉತ್ತರಕರ್ನಾಟಕದಲ್ಲಂತೂ ಅವರಿಗೆ ಅಪಾರ ಜನಪ್ರಿಯತೆ. ಅಲ್ಲಿ ಗುಲಾಂಗಂಡ, ಮಲಮಗಳು, ಅಣ್ಣತಂಗಿ ಸಾಮಾಜಿಕಗಳಿಗೆ ಡಿಮ್ಯಾಂಡೋ ಡಿಮ್ಯಾಂಡು. ನಮ್ಮವರದೇ ಪ್ರಧಾನ ಹಾಸ್ಯ ಪಾತ್ರ. ಹಾಸ್ಯ ಪಾತ್ರ ನಿರ್ವಹಣೆಯಲ್ಲಿ ಆ ಕಾಲದ ಇನ್ನಾವುದೇ ನಟ ತೋರದ ವಿಶಿಷ್ಟ ಶೈಲಿ, ಸ್ಪೆಷಲ್ ಸ್ಟೈಲ್ ಅವರದು. ಹಾಸ್ಯ ಸನ್ನಿವೇಶಗಳಲ್ಲಿ ನಟನೆಯ ಚಾಲಾಕು ತೋರಿಸಿಯೋ, ನಗೆಚಾಟಿಕೆ ಹಾರಿಸಿಯೋ ಇಲ್ಲವೇ ನಡೆ- ನಿಲುವುಗಳಲ್ಲಿ ಚಾಕಚಕ್ಯತೆ ಮೆರೆಸಿಯೋ ಆದ ಮೇಲೆ, ನಗೆನಟ ತಾನೂ ನೋಡುಗರೊಂದಿಗೆ ಗೊಳ್ಳೆಂದು ನಗುವುದು, ಹಲ್ಲು ಕಿಸಿದು ನಿಲ್ಲುವುದು ಸಾಮಾನ್ಯ. ಇನ್ನು ತನ್ನ ನಟನೆಗೆ ಚಪ್ಪಾಳೆಗಳೇನಾದರೂ ಬಿದ್ದು ಬಿಟ್ಟರೆ, ನಾಟಕದಲ್ಲೂ ಇಲ್ಲದ ಹುಚ್ಚುಚ್ಚಾರಗಳನ್ನೂ ಮೆರೆದು ಬಿಡುವುದುಂಟು. ತನ್ನ ಅತ್ಯುತ್ಸಾಹದಿಂದ ಸಹ ನಟರು, ನಿರ್ದೇಶಕರನ್ನು ಗಲಿಬಿಲಿಗೆ ದೂಡುವುದೂ ಉಂಟು.

ಈ ನಿಲುವಿಗೆ ಪಾರ್ಥರ ಒಲವಿಲ್ಲ. ಹಾಸ್ಯ ದೃಶ್ಯದಲ್ಲಿ ನಟನೂ ತನ್ನ ನಡೆ- ನುಡಿಗಳಿಗೆ ತಾನೇ ನಕ್ಕು ಬಿಟ್ಟರೆ, ಸನ್ನಿವೇಶದ ಸ್ವಾರಸ್ಯ ಕುಗ್ಗಿ ಬಿಡುತ್ತದೆ, ತೀವ್ರತೆ ತಗ್ಗಿ ಬಿಡುತ್ತದೆ, ನೈಜತೆ ಮರೆಯಾಗುತ್ತದೆ ಎಂದೇ ಅವರ ವಾದ. ಅದಕ್ಕೆ ತಕ್ಕುದಾದ ಶೈಲಿಯೊಂದನ್ನು ತಾವೇ ರೂಪಿಸಿಕೊಂಡು ತಮ್ಮ ನಟನೆಯಲ್ಲಿ ಅಳವಡಿಸಿಕೊಂಡಿದ್ದರು. ಎಂಥದೇ ನಗೆ ಉಕ್ಕಿಸುವ ಪ್ರಸಂಗವಿರಲಿ, ಹಾಸ್ಯ ಹೊಮ್ಮಿಸುವ ಸಂಭಾಷಣೆಯಿರಲಿ, ನೋಡುಗರು ಬಿದ್ದು ಬಿದ್ದು ನಗಬೇಕು, ನಕ್ಕು ನಕ್ಕು ಬೀಳಬೇಕು. ಹಾಗೆ ನೋಡುಗರು ಹೊಟ್ಟೆ ಹುಣ್ಣಾಗುವಷ್ಟು ನಗುತ್ತಿದ್ದರೂ, ಗಹಗಹಿಸಿ ಹುಯಿಲೆಬ್ಬಿಸುತ್ತಿದ್ದರೂ ಹಾಸ್ಯ ನಟ ಪಾರ್ಥರು ತೆಪ್ಪಗೆ ನಿಂತು ಬಿಡುತ್ತಿದ್ದರು. ತಾವೇ ನಟಿಸಿ, ನಗೆಚಾಟಿಕೆ ಹಾರಿಸಿದ್ದರೂ ಅದಕ್ಕೂ ತಮಗೂ ಏನೂ ಸಂಬಂಧವಿಲ್ಲವೇನೋ ಎಂಬಂಥ ನಿರ್ಲಿಪ್ತ ನಿಲುವು. ಮುಗ್ಧ, ಏನು ಬಂತು? ಒಂದು ರೀತಿಯ ಮೊದ್ದು -ಬೆಪ್ಪು ಕಳೆ ತೋರಿ, ಪೆಚ್ಚು ನೋಟ ಬೀರಿ, ಮಂಕು ಮಂಕಾದಂತೆ ನಿಂತು ಬಿಡುತ್ತಿದ್ದರು. ನಿಜವಾಗಿಯೂ ಇದು ದೃಶ್ಯದ ಪರಿಣಾಮ- ಪ್ರಭಾವವನ್ನು ಹಲವು



ಪಟ್ಟು ಹೆಚ್ಚಿಸುತ್ತಿತ್ತು. ಹಾಸ್ಯದ ಹೊನಲು ನೋಡುಗರ ನಡುವೆ ಉಕ್ಕೇರುತ್ತಿತ್ತು, ಹುಚ್ಚು ಹೊಳೆಯಂತೆ ಹರಿಯುತ್ತಿತ್ತು. ರಸಿಕರಿಗೆ ಹಾಸ್ಯದ ರಸದೌತಣವನ್ನೇ ಉಣಬಡಸಿದಂತಾಗುತ್ತಿತ್ತು. ಆ ಶೈಲಿಯನ್ನು ಮುಂದೆ ಹಲವಾರು ಹಾಸ್ಯ ನಟರು ಅನುಕರಣೆ ಮಾಡಹೋದರೂ ಅದು ದಕ್ಕಿದ್ದು ಬೆರಳಣಿಕೆಯಷ್ಟು ಮಂದಿಗೆ ಮಾತ್ರ.

ಶೇಷಾಚಾರ್ ಹಾಗೂ ಹಿರಣ್ಣಯ್ಯನವರ ಮಧ್ಯೆ ಏನೋ ಒಂದು ಕಾರಣಕ್ಕೆ ಮನಸ್ತಾಪ ಬಂತು. ಶೇಷಾಚಾರ್ ಮಂಡಲಿಯನ್ನು ತೊರೆದು ಹೊರಹೋಗಬೇಕಾದ ಸನ್ನಿವೇಶ ಉಂಟಾಯಿತು. ಆಗ ಇವೆಲ್ಲಾ ಮಾಮೂಲಿ ಸಂಗತಿ. ಮಾಲೀಕರೂ ಒಬ್ಬನೇ ಅಥವಾ ಕೇವಲ ಕೆಲವರೇ ಕಲಾವಿದರನ್ನು ನೆಚ್ಚಿಕೊಂಡಿರುತ್ತಿರಲಿಲ್ಲ. ಕಲಾವಿದರಾದರೂ ಒಂದೇ ಕಂಪನಿಯನ್ನು ನಂಬಿಕೊಂಡಿರುವಂತಿರಲಿಲ್ಲ. ಅದರಲ್ಲೂ ಮಂಡಲಿಯ ಯಾವೊಬ್ಬ ಕಲಾವಿದನಾಗಲೀ, ಉದ್ಯೋಗಿಯಾಗಲೀ ಮಾಲೀಕರೊಡನೆ ಸಲಿಗೆ - ಸಖ್ಯದಿಂದ ಇದ್ದು ಬಿಟ್ಟರಂತೂ ಅದನ್ನು ಸಹಿಸದ ವ್ಯಕ್ತಿಗಳಿಗೇನೂ ಬರವಿರುತ್ತಿರಲಿಲ್ಲ. ತಮ್ಮ ಬೇಳೆ ಬೇಯಿಸಿಕೊಳ್ಳಲೆಂದು ಹಾಲಿನಂತಹ ಈ ಸ್ನೇಹಕ್ಕೆ ಹುಳಿ ಹಿಂಡಲು ಅವರು ತುದಿಗಾಲಲ್ಲೇ ಕಾದಿರುತ್ತಿದ್ದರು. ಚಾಡಿ- ಛುದ್ರವನ್ನು ಚುಚ್ಚುವ, ಕಿಚ್ಚು ಹಚ್ಚುವ ಚಾಣಾಕ್ಷರೂ, ಚಾಣಕ್ಯರೂ ಇದ್ದೇ ಇದ್ದರು.

ಶೇಷಾಚಾರ್‌ರಿಗೂ ಪಾರ್ಥಸಾರಥಿಯವರಿಗೂ ಅಪಾರ ಅನ್ಯೋನ್ಯತೆ, ಆತ್ಮೀಯತೆ, ಆಪ್ತತೆ. 'ಪಾರ್ಥ, ನಾನು ಹೊಸ ಕಂಪನಿ ಕಟ್ಟುತ್ತೇನೆ. ನೀನೂ ಖಂಡಿತಾ ಬಂದು ಬಿಡಯ್ಯ' ಎಂದವರ ಒತ್ತಡ. ಅದಕ್ಕೆ ಪಾರ್ಥರು ಹೂಂಗುಟ್ಟಿದ್ದರು. ಈ ವೇಳೆಗಾಗಲೇ ಪಾರ್ಥರೊಡನೆ ನನ್ನ ಸ್ನೇಹ, ಪ್ರೇಮವಾಗಿ ಮಾರ್ಪಟ್ಟಿದ್ದು, ಪ್ರೀತಿಯಾಗಿ ಹೆಪ್ಪುಗಟ್ಟಿತ್ತು. ಹೀಗಾಗಿ ನಾನೂ ಅವರ ಮಾತಿಗೆ ಓಗೊಟ್ಟು, ಅವರ ಹಾದಿಯನ್ನೇ ಹಿಡಿದು ಅವರ ಜೊತೆ ನಡೆದೆ. ಮಿತ್ರಮಂಡಲಿಯ ಆಗಿನ ಕ್ಯಾಂಪ್ ಮುಗಿದ ಕೂಡಲೇ ನಾವು ಹೊರ ಹೊರಟೆವು.

## ನಾನು ಬಡವಿ, ಆತ ಬಡವ - ಒಲಿದು ಒಂದಾದೆವು

೧೯೪೫ರಲ್ಲಿ 'ಶೇಷಕಮಲ್ ಕಲಾಮಂಡಲಿ'ಯ ಆರಂಭ. ಈ ಹೊತ್ತಿಗಾಗಲೇ ನಮ್ಮಿಬ್ಬರಲ್ಲಿ ಪ್ರೇಮಾಂಕುರವಾಗಿರುವ ಸುಳಿವು ಶೇಷಾಚಾರ್‌ರಿಗೆ ಸಿಕ್ಕಿಬಿಟ್ಟಿತ್ತು. ಅವರೊಮ್ಮೆ ನಮ್ಮ ಮನೆಗೆ ಬಂದು ನಮ್ಮಮ್ಮನ ಎದುರು ನಮ್ಮಿಬ್ಬರ ಮದುವೆಯ ಮಾತೆತ್ತಿದರು. ಅವರು ನಮ್ಮ ಕುಟುಂಬಕ್ಕೆ ತುಂಬಾ ಬೇಕಾದವರು. ಮೊದಲಿನಿಂದಲೂ ನಮ್ಮ ಕಷ್ಟ - ಸುಖ ತಿಳಿದವರು. ನಮ್ಮಿಬ್ಬರ ಇಷ್ಟಾನಿಷ್ಟ ಅರಿತವರು. ಹೀಗಾಗಿ ಅವರ ಮಾತಿಗೆ ಅಮ್ಮ ಒಲ್ಲೆ ಎನ್ನಲಾಗದೆ, ಬೆಲೆ ಕೊಟ್ಟು ಒಪ್ಪಿಗೆ ನೀಡಿದರು. ಆದರೂ ಇದು ನನ್ನ ಪ್ರಿಯಕರನ ಮನೆಯವರಿಗೆ ಹಿತಕರವಾಗಿರಲಿಲ್ಲ. ಹೇಳಿ ಕೇಳಿ ನಾನು 'ನಾಟಕದ ಹುಡುಗಿ!'. ಅನುಕೂಲಸ್ಥ ಕುಟುಂಬದವಳೂ ಅಲ್ಲ, ಅವರಂತೆ ಅಯ್ಯಂಗಾರ್ ಕುಲದವಳೂ ಅಲ್ಲ. ಆಗಿನ ಸಮಾಜದಲ್ಲಿ ಇಂಥ ಸಂಬಂಧಕ್ಕೆಲ್ಲ ಒಪ್ಪಿಗೆ ಸಿಗುತ್ತಿರಲಿಲ್ಲ. ಸಮ್ಮತಿ ಸಲ್ಲುತ್ತಿಲಿಲ್ಲ. ಮನ್ನಣೆ, ಮಾನ್ಯತೆ ಖಂಡಿತವಾಗಿಯೂ ದೊರೆಯುತ್ತಿರಲಿಲ್ಲ. ಮೆಚ್ಚುಗೆಯಂತೂ ದೂರವೇ ಉಳಿಯುತ್ತಿತ್ತು.

ಶೇಷಾಚಾರ್ಯರೇ ನಮಗೆಲ್ಲ ಧೈರ್ಯ- ಬುದ್ಧಿ ಹೇಳಿದರು. ತಾವೇ ಮುಂದೆ ನಿಂತು ರಿಜಿಸ್ಟರ್ ಮದುವೆ ಮಾಡಿಸಿ ದೇವಸ್ಥಾನದಲ್ಲಿ ಮಾಂಗಲ್ಯ ಕಟ್ಟಿಸಿದರು. ನನಗಾಗ ಹತ್ತೊಂಬತ್ತು ವರ್ಷ, ಪಾರ್ಥರಿಗೆ ಮೂವತ್ತೊಂದು. ಪ್ರೇಮವೆನ್ನುವುದು ಹೃದಯದ ಭಾವ - ಭಾಷೆ - ಬಂಧವಲ್ಲವೇ? ಹೀಗಾಗಿ ನಮ್ಮ ಒಲವಿನ ಮಿಲನಕ್ಕೆ ವಯೋ ಅಂತರ, ಜಾತಿಭೇದ ಯಾವುದೂ ಅಡ್ಡ ನಿಲ್ಲಲಿಲ್ಲ. ರಂಗದ ದೃಶ್ಯವೊಂದರಂತೆಯೇ ನಮ್ಮ ಮದುವೆಯೂ ನಡೆದುಹೋಯಿತು.

ಆಗಿನ ಲೋಕಾರೂಢಿಯ ಮದುವೆಗಳಂತೆ ಯಾವ ಆಡಂಬರದ ಗೊಡವೆಯೂ ಇಲ್ಲದಂತೆ ಸರಳವಾಗಿ ನಡೆದುಹೋಯಿತು. ಆರತಕ್ಷತೆ, ಅದ್ದೂರಿ ಔತಣದ ವಿಜೃಂಭಣೆಯಿಲ್ಲ. ಯಾವುದೇ ಉಡುಗೊರೆ, ಒಡವೆ, ವಸ್ತ್ರಗಳ ವೈಭವವಿಲ್ಲ. ನನಗಂತೂ ಮೊದಲಿಂದ ಚಿನ್ನದ ಮೋಹವೇ ಇರಲಿಲ್ಲ. ಬಿಚ್ಚೋಲೆ ಗೌರಮ್ಮನಂತೆಯೇ ಮದುವೆಯ



ವಧುವಾದೆ. ಆ ಕಾಲಕ್ಕೆ ನನ್ನ ಕೈಲಿದ್ದುದು ಗಾಜಿನ ಬಳೆಗಳಷ್ಟೇ. ಶೇಷಾಚಾರ್‌ರ ಅಣ್ಣ ರಂಗಸ್ವಾಮಿಗಳಿಗೇಕೋ ತುಂಬಾ ಪಿಚ್ಚೆನಿಸಿರಬೇಕು. ಮದುವೆಗೆ ಒಂದೆರಡು ದಿನ ಇದೆ ಎನ್ನುವಾಗ ನನ್ನ ಬಳಿ ಬಂದರು. 'ಏನಮ್ಮ ನಿನ್ನ ಹತ್ತಿರ ಏನೂ ಚಿನ್ನದ ಒಡವೆಯೇ ಇಲ್ಲವೇ? ಒಂದು ಜೊತೆ ಬಳೆಯನ್ನಾದರೂ ಮದುವೆ ದಿನಕ್ಕೆ ಹಾಕಿಕೋ' ಎಂದರು. ನಾನು 'ರಂಗಸ್ವಾಮಿಗಳೇ, ನಿಮಗೆ ಗೊತ್ತಿಲ್ಲದ್ದು ಯಾವುದಿದೆ? ಚಿನ್ನವಿರಲಿ, ಚಿನ್ನದ ಆಸೆ ಕೂಡಾ ನನ್ನ ಬಳಿ ಸುಳಿಯುವಂತಿಲ್ಲ. ಚಿನ್ನದ ಬಳೆಗಿರಲಿ, ಕೋಡುಬಳೆಗೂ ನನ್ನ ಬಳಿ ಕಾಸಿಲ್ಲವಲ್ಲ! ಹೋಗಲಿ ಬಿಡಿ, ನನಗೇನು ಬೇಜಾರಿಲ್ಲ' ಎಂದೆ. ಅವರು 'ಹಾಗಲ್ಲಮ್ಮ, ಮದುವೆ ಅಂತಂದ ಮೇಲೆ ಸಾಲಂಕೃತವಲ್ಲದಿದ್ದರೂ ವಧು ಅಲ್ಪ - ಸ್ವಲ್ಪ ಅಲಂಕೃತಳಾದರೂ ಆಗಿರಬೇಕು. ಈಗೊಂದು ಕೆಲಸ ಮಾಡೋಣ. ನಾನು ಹೇಗೋ ಹಣ ಹೊಂದಿಸಿ ಒಂದು ಜೊತೆ ಬಳೆ ಮಾಡಿಸಿರುತ್ತೇನೆ. ಮದುವೆ ದಿನಕ್ಕೆ ಹಾಕಿಕೋ. ದುಡ್ಡನ್ನು ನಿನ್ನ ತಿಂಗಳ ಸಂಬಳದಲ್ಲಿ ಮೂವತ್ತೋ ನಲವತ್ತೋ ಹಿಡಿದುಕೊಂಡರಾಯಿತು. ಶೇಷನಿಗೂ ಹೇಳ್ತೀನಿ' ಎಂದರು. ಬಂಗಾರದಂಗಡಿಗೆ ಹೋಗಿ ಬಳೆ ತಂದರು. ಅದೇ ನಾನು ಜೀವನದಲ್ಲಿ ಮೊತ್ತಮೊದಲಿಗೆ ಕಂಡ ಚಿನ್ನ! ಪಾರ್ಥರಂತೂ "ಚಿನ್ನ-ರನ್ನ" ಎಂದು ನನ್ನನ್ನು ರಮಿಸಬಲ್ಲವರಾಗಿದ್ದರೇ ಹೊರತು ಚಿನ್ನ ತೊಡಿಸುವ ಸ್ಥಿತಿಯಲ್ಲಿರಲಿಲ್ಲ.

ಮದುವೆಯ ಕೆಲ ಕಾಲಾನಂತರ ಹಾಸನದಲ್ಲಿ ಕ್ಯಾಂಪ್. ನಾನಾಗ ಗರ್ಭಿಣಿಯಾಗಿದ್ದೆ. ಕಂಪನಿಯಲ್ಲಿದ್ದ ನಟಿಯರ ಸಂಖ್ಯೆಯೋ ಮೂರು, ಮತ್ತೊಂದು. ಮುಖ್ಯ ಪಾತ್ರ ವಹಿಸುವವರಂತೂ ಮತ್ತೊಬ್ಬರಿಲ್ಲ. ಆದ್ದರಿಂದ ದಿನ ತುಂಬುವವರೆಗೂ ನಾಟಕಗಳಲ್ಲಿ ಮಾಡುತ್ತಿದ್ದೆ. ನನ್ನ ಅದೃಷ್ಟ! ಅಲ್ಲಿಯವರೆಗೂ ನನ್ನ ಹೊಟ್ಟೆ ನೋಡುವವರಿಗೆ ತನ್ನ ಗುಟ್ಟು ಬಿಟ್ಟುಕೊಟ್ಟಿರಲಿಲ್ಲ. ಬಸುರಿಯ ಬಯಕೆಯನ್ನು ಪೂರೈಸಿಕೊಳ್ಳುವುದಿರಲಿ, ಬಾಯಿಬಿಟ್ಟು ಬೇಕಾದವರೊಡನೆ ಹೇಳಿಕೊಳ್ಳಲೂ ಬಿಡುವು ಕೊಡಲಿಲ್ಲ ಬಣ್ಣದ ಬದುಕು, ಬದುಕಿನ ಬವಣೆ ಇವೆರಡೂ.

ಆ ವೇಳೆಗೆ ನಮ್ಮಮ್ಮ ಬೆಂಗಳೂರಿಗೆ ವರ್ಗವಾಗಿ ಬಂದಿದ್ದರು. ಚೊಚ್ಚಲ ಹೆರಿಗೆಗಾಗಿ ಅವರಲ್ಲಿಗೆ ಬಂದೆ. ಹೆಣ್ಣು ಮಗುವನ್ನು ಹಡೆದೆ. ಮುದ್ದು ಮಗುವಿನ ಮೊಗ ನೋಡಿದೊಡನೆ ನನ್ನ ದುಃಖ ದುಗುಡಗಳೆಲ್ಲ ಮಾಯವಾಗಿ ಬಿಡುತ್ತಿದ್ದವು. ನನ್ನ ಬದುಕಿನ ನಲಿವಿನ, ಚೆಲುವಿನ ದಿನಗಳವು.'

ಎರಡು ತಿಂಗಳು ಬಾಣಂತಿತನವಾಯಿತು. ನಮ್ಮಮ್ಮ, ಅಜ್ಜಿ ತಮ್ಮ ಕೈಲಾದಷ್ಟು ಆರೈಕೆ, ಉಪಚಾರ ಮಾಡಿದರು. ಇನ್ನೆಷ್ಟು ದಿನ ಹೀಗೇ ಇರಲು ಸಾಧ್ಯ? ತುತ್ತಿನ ಚೀಲ ತುಂಬಬೇಕಲ್ಲ? ಅಲ್ಲದೆ ಸಂಸಾರಕ್ಕೆ ಸೇರಿದ ಹೊಸ ಜೀವದ ಲಾಲನೆ- ಪಾಲನೆಯೂ ಆಗಬೇಕಲ್ಲ? ಮತ್ತೆ ಬಣ್ಣ ಹಚ್ಚಲು ಶುರುಮಾಡಿದೆ. ಕೊಳ್ಳೇಗಾಲದಲ್ಲಿ ಮೊಕ್ಕಾಂ.

ನಾಟಕದವರದ್ದೇನೋ ಬಿಸಿಲು-ಚಳಿ-ಗಾಳಿ-ಮಳೆ ಎಲ್ಲಕ್ಕೂ ಒಡ್ಡಿಕೊಳ್ಳುವ, ಒಗ್ಗಿಕೊಳ್ಳುವ 'ಹವಾ -ನಿಯಂತ್ರಿತ' ಶರೀರ! ಛತ್ರವೋ - ಚಪ್ಪರವೋ, ಟೆಂಟೋ- ಥಿಯೇಟರೋ, ತಲೆಯ ಮೇಲೊಂದು ಸೂರಿದ್ದರೆ ಅದೇ ಆಸರೆ, ಅರಮನೆ. ಆದರೆ ತಿಂಗಳೆರಡರ ಹಸುಗೂಸಿಗೆ ಹೀಗೆಲ್ಲ ಆಗುತ್ತದೆಯೇ? ಅದಕ್ಕೆ ಒಂದಲ್ಲ ಒಂದು ಬಾಧೆ- ತೊಂದರೆ, ನಮಗೆ ವೇದನೆ. ನಾನು ರಂಗದ ಮೇಲೆ ಹೋಗಿ ಹಿಂದಿರುಗುವವರೆಗೂ ಅದು ಅಳುತ್ತಿತ್ತು. ಅದನ್ನು ಸಮಾಧಾನಿಸಲು, ಸುಮ್ಮನಿರಿಸಲು ಹರಸಾಹಸ ಮಾಡುತ್ತಿದ್ದರು, ನನ್ನ ಪತಿರಾಯ ಮತ್ತು ಕಂಪನಿ ಹುಡುಗರು. ನಾನಂತೂ ರಂಗದ ವೇಷ, ಎಳೆಕೂಸು ಎರಡರಲ್ಲಿ ಯಾವುದನ್ನೂ ಕೈ ಬಿಡುವಂತಿರಲಿಲ್ಲ.

ಆಗಿನ ಒಂದು ಅನುಭವವನ್ನಂತೂ ಇಂದಿಗೂ ಮರೆಯುವ ಹಾಗಿಲ್ಲ. ಒಮ್ಮೆ ನಾವೆಲ್ಲ ಹೊಸಪೇಟೆಯಿಂದ ಕೊಟ್ಟೂರಿಗೆ ಹೊರಟಿದ್ದೇವೆ. ಬಸ್ಸು ಹಿಡಿಯಬೇಕಾದರೆ ಕೆರೆಯ ಒಂದು ದಂಡೆಯಿಂದ ಇನ್ನೊಂದಕ್ಕೆ ದಾಟಿ ಹೋಗಬೇಕು. ಕೆರೆಯಂಗಳವಾದರೂ ಅದರಲ್ಲಿ ನೀರೇ ಇಲ್ಲ, ಬರೀ ಮರಳು. ಮಗುವನ್ನೆತ್ತಿಕೊಂಡು ಜಾರುತ್ತಿರುವ ಮರಳು ದಾರಿಯಲ್ಲಿ ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತಾ ಸಾಗಿದ್ದೇವೆ. ಅದುವರೆಗೆ ಎಲ್ಲಿತ್ತೋ, ಇದ್ದಕ್ಕಿದ್ದ ಹಾಗೆ ಭೋರೆಂದು ಜೋರು ಮಳೆ. ಮುಂದೆಯೂ ಹೋಗಲಾರೆವು- ಹಿಂದಕ್ಕೂ ಮರಳಲಾರೆವು. ಮಗು ಮಳೆಯಲ್ಲಿ ನೆಂದು, ಚಳಿಗೆ ನಡುಗಿ ಗೋಳಿಡುತ್ತಿದೆ. ಆಸರೆಗಾಗಿ ಒಂದು ಮರವೂ ಇಲ್ಲ, ಮರೆಯೂ ಇಲ್ಲ. ಒಂದೊಂದು ಗಜ ಸಾಗುವುದೂ ಗಜಸಾಹಸವೇ ಆಯಿತು. ಮುಂದೆ ಮುಂದೆ ಸಾಗಿದಂತೆ ಮಧ್ಯೆ ಮೋಟುಮರವೊಂದು ಸಿಕ್ಕಿತು. ಅದೇ ವಟವೃಕ್ಷವೆಂಬಂತೆ, ಗೋವರ್ಧನಗಿರಿ ಎಂಬಂತೆ ಅದರ ಸೆರಗಿನಲ್ಲಿ ಒಟ್ಟಾಗಿ ಒತ್ತಾಗಿ ಒರಗಿ ನಿಂತೆವು, ಹತ್ತಾರು ಮಂದಿ. ಇದೊಂದು ಹುಚ್ಚು ಮಳೆ, ನಿಲ್ಲಲು ಹಲವಾರು ಘಂಟೆಗಳೇ ಆದೀತು ಎಂಬ ಅಳುಕು ಎಲ್ಲರಿಗೂ. ಆದರೂ ಏನೂ ಮಾಡುವಂತಿಲ್ಲ. ದೇವರ ಮೇಲೆ ಭಾರ ಹಾಕಿ ಹಾಗೆಯೇ ಸುಮಾರು ಘಂಟೆಗಳನ್ನೇ ಕಳೆದೆವು. ಮಳೆ ಸ್ವಲ್ಪ ಸ್ವಲ್ಪವೇ ಕಮ್ಮಿಯಾಗತೊಡಗಿದಂತೆ ಎದ್ದೆನೋ ಬಿದ್ದೆನೋ, ಎಂದು ಎಲ್ಲರೂ ಕಾಲನ್ನು ಎಳೆದೆಳೆದು ಹಾಕಿದೆವು. ಹಾಗೂ ಹೀಗೂ ಆಚೆಯ ದಡ ಸೇರುವಾಗ ನಾವೆಲ್ಲ ತೊಪ್ಪನೆ ತೋಯ್ದು ಒದ್ದೆ - ಮುದ್ದೆಯಾಗಿದ್ದೆವು. ಕಡೆಗೂ ಬದುಕಿಕೊಂಡೆಯಲ್ಲಾ ಬಡ ಜೀವವೇ ಎಂದು ನಿಟ್ಟುಸಿರೆಳೆದವು. ನೆನೆಸಿಕೊಂಡರೆ ಈಗಲೂ ಬೆವರುವಂಥ ಸ್ಥಿತಿ, ಬೆಚ್ಚುವಂಥ ಅವಸ್ಥೆ ಅಂದಿನದು.

ಮುಂದೆಯೂ ಅಷ್ಟೇ. ಹಲವು ಹತ್ತು ಕಷ್ಟಗಳ ಮಳೆ, ಕಾರ್ಪಣ್ಯಗಳ ಹೊಳೆ ಹರಿದಾಗ ಎದೆಗೆಡದೆ ಕಗ್ಗಲ್ಲಾಗಿ ನಿಲ್ಲಬೇಕಾಯಿತು. ಮೂಗು ಮುಚ್ಚಿ ಮುಳುಗೇಳಬೇಕಾಯಿತು. ಏನಾದರೇನು? ರಂಗವೇ ನಮ್ಮ ಜೀವ, ಜೀವನ, ಜೀವಾಳ. ಅದರ ಕುರಿತು ನಮಗೆ ಅಪಾರ



ಅಭಿಮಾನ, ಗೌರವ. ಅದು ಬರೀ ವೃತ್ತಿಯೆಂದು ನಾವೆಂದೂ ತಿಳಿದವರಲ್ಲ. ಅದೇ ನಮ್ಮ ಪ್ರವೃತ್ತಿ, ಅದರಿಂದ ನಮಗೆಂದೂ ಇಲ್ಲ ನಿವೃತ್ತಿ ಎಂದು ನಂಬಿದವರು, ನೆಚ್ಚಿದವರು. ಬರಲಿ ಎಂಥದೇ ನೋವು, ನಾಟಕವನ್ನು ಬಿಡೆವು ಎಂಬ ಛಲ- ಸಂಕಲ್ಪ ನಮ್ಮಲ್ಲಿತ್ತು. ಇಷ್ಟಕ್ಕೂ ಉದರಪೋಷಣೆಗಾಗಿ ಇನ್ನಾವ ಉದ್ಯೋಗ ತಾನೇ ನಮ್ಮನ್ನು ಅರಸಿ ಬಂದಿತ್ತು? ನಾವು ಉದ್ಧಾರವಾದೇವೆಂದು ಬೇರೆ ಯಾವ ಉದ್ಯಮ ತಾವೇ ಕರ ಬೀಸಿ ನಮ್ಮನ್ನು ಕರೆದಿತ್ತು? ಹೀಗಾಗಿ ನಾವೂ ರಂಗವನ್ನು ಬಿಡೆವು. ಅದೂ ನಮ್ಮ ಕೈ ಬಿಡದು ಎಂಬ ಸ್ಥಿತಿಯಿತ್ತು. ಒದಗಿ ಬಂದ ಕಷ್ಟಗಳು ನಮ್ಮನ್ನು ಕುಗ್ಗಿಸುವ ಬದಲಿಗೆ ಅವುಗಳೇ ಒಗ್ಗಿ - ಬಗ್ಗಿ ಹೋಗಿಬಿಡುತ್ತಿದ್ದವು.

ಕೈಗೂಸನ್ನು ಕಟ್ಟಿಕೊಂಡು ಮಂಗಳೂರು ಮೊಕ್ಕಾಂಗೆ ಹೊರಟೆವು. ಅಲ್ಲಿ 'ಧರ್ಮರತ್ನಾಕರ' ನಾಟಕ ಪ್ರದರ್ಶನಗಳು ಪ್ರಾರಂಭವಾಗಬೇಕು. ಆದರೆ ನಮ್ಮ ದುರದೃಷ್ಟ, ದೇಶದ ದುರ್ದೈವ- ಮಹಾತ್ಮಗಾಂಧಿಯವರ ಬರ್ಬರ ಹತ್ಯೆ ನಡೆಯಿತು. ಆ ಸುದ್ದಿ ಬರಸಿಡಿಲಿನಂತೆ ಬಡಿಯಿತು. ದೇಶದ ಉದ್ದಗಲಕ್ಕೂ ದಿಗ್ಭ್ರಮೆ- ದುಃಖ, ದುಗುಡ- ದುಮ್ಮಾನ.ಇಡೀ ತಿಂಗಳು ಶೋಕಾಚರಣೆ. ಮನರಂಜನಾ ಕಾರ್ಯಕ್ರಮಗಳೆಲ್ಲವೂ ರದ್ದಾದವು. ಸರ್ಕಾರಿ ಆಜ್ಞೆಯೂ ಹೊರಟಿತು. ನೀಡಿದ್ದ ಲೈಸನ್ಸುಗಳೆಲ್ಲಾ ಕ್ಯಾನ್ಸಲ್ ಆದವು. ನಮ್ಮ ನಾಟಕದ ಪರದೆ ಜಾರಿತು. ನಮ್ಮ ಊಟಕ್ಕೂ ಪರದಾಟ ಪ್ರಾರಂಭವಾಯಿತು ಎಂದು ಪ್ರತ್ಯೇಕವಾಗಿ ಹೇಳಬೇಕಿಲ್ಲವಲ್ಲ? ಅನಾಯಾಸವಾಗಿ ದೊರೆತ ವಿರಾಮವನ್ನು ಪ್ರಯಾಸದಿಂದ ಅನುಭವಿಸಲು ಪ್ರವಾಸ, ಪ್ರಯಾಣಕ್ಕೆ ಅಣಿಯಾದೆವು.

ನಮ್ಮ ಅದೃಷ್ಟವನ್ನು ಅರಸಿಕೊಂಡು ಚಾಮರಾಜನಗರಕ್ಕೆ ಹೋದೆವು. ಅಲ್ಲಿ ಶೇಷಾದ್ರಿಯವರ 'ಭಾರತ ಲಲಿತ ಕಲಾ ಸಂಘ'ದ ಬಳಿ ಕ್ಯಾಂಪ್ ಹಾಕಿದೆವು. ಆ ಕಾಲಕ್ಕೆ ಬೆಳ್ಳಾವೆ ನರಹರಿ ಶಾಸ್ತ್ರಿಗಳು ಬರೆದ 'ಸದಾರಮೆ' ತುಂಬಾ ಜನಪ್ರಿಯ ನಾಟಕ. ಅದನ್ನೇ ಹಿರಣ್ಣಯ್ಯನವರು ಪರಿಷ್ಕರಿಸಿ, ತುಸು ಪರಿವರ್ತಿಸಿ 'ನವೀನ ಸದಾರಮೆ' ಹೆಸರಿನಲ್ಲಿ ಪ್ರಯೋಗಿಸುತ್ತಿದ್ದರು. ನಾನು ನಿರ್ವಹಿಸುತ್ತಿದ್ದುದು ಸದಾರಮೆ ಪಾತ್ರ. ಅದೊಂದು ದಿನ ನಾನು ಅನುಭವಿಸಿದ ಸಂಕಟ ನನ್ನ ಶತ್ರು (ಯಾರಾದರೂ ಇದ್ದರೆ!)ವಿಗೂ ಬೇಡ. ಅದರಲ್ಲಿ ಪುರುಷವೇಷದ ಸನ್ನಿವೇಶ. ಷರಟು, ಕೋಟು ಧರಿಸಿ ನಾಟಕ ಆಡುತ್ತಿದ್ದೇನೆ. ನನ್ನ ಮಗಳನ್ನು ರಂಗದ ಹಿಂದಿನ ಗ್ರೀನ್‌ರೂಂನಲ್ಲಿ ಮಲಗಿಸಿದ್ದೆ. ಮಧ್ಯದಲ್ಲಿಯೇ ಎಚ್ಚರವಾಗಿರಬೇಕು. ಇದ್ದಕ್ಕಿದ್ದಂತೆ ಜೋರಾಗಿ ಅಳಲಾರಂಭಿಸಿತು.

ವಿಪರೀತ ಹಸಿವೋ, ಆಯಾಸವೋ? ನಮ್ಮ ಯಜಮಾನರು ಮತ್ತು ಒಂದಿಬ್ಬರು ಹುಡುಗರು ಎತ್ತಿಕೊಂಡು ಸಮಾಧಾನ ಮಾಡಲು ಯತ್ನಿಸುತ್ತಾ ಇದ್ದಾರೆ. ಆದರೂ ಅವಳ ಅಳು ನಿಲ್ಲಲೇ ಇಲ್ಲ. ಕಂಪನಿ ಹುಡುಗರು ಥಿಯೇಟರ್ ಹೊರಗಿನ ಅಂಗಳದ ಮೂಲೆ ಮೂಲೆಗೂ ಕರೆದುಕೊಂಡು ಹೋದರು. ಆದರೂ ನನಗೆ ಅಳು ಕೇಳುತ್ತಲೇ ಇದೆ.

ತಾಯಿಕರುಳು ಕಿವಿಚಿದಂತಾಗುತ್ತಿದೆ. ಹೃದಯ ಹೊಯ್ದಾಡುತ್ತಿದೆ. ಹೊರಗೆ ಹೋಗುವ ಹಾಗಿಲ್ಲ, ಆರಾಮವಾಗಿ ಅಭಿನಯಿಸುವಂತಿಲ್ಲ. ವಿಚಿತ್ರ ಸಂಕಟವನ್ನು ಅನುಭವಿಸಿದೆ. ದೃಶ್ಯಗಳ ನಡುವಿನ ಬಿಡುವಿನಲ್ಲಿ ಹೊರ ಹೋಗಿ ಬರೋಣವೆಂದರೆ ತೊಟ್ಟಿದ್ದದ್ದು ಗಂಡು ಉಡುಗೆ. ಕೂಸನ್ನು ಹುಡುಕಿ ಹೋಗಿ ಹಾಲೂಡುವುದೂ ಸುಲಭವಲ್ಲ. ನನಗೋ ಅಳು ಒತ್ತೊತ್ತಿ ಬರುತ್ತಿದೆ. ನನ್ನ ಅವಸ್ಥೆ- ಅಸಹಾಯಕತೆಯ ಬಗ್ಗೆ ನನಗೇ ಜಿಗುಪ್ಸೆ, ರೋಷ. ಪಾತ್ರ ಮುಗಿದು ಪೋಷಾಕು - ವೇಷ ಬದಲಿಸಿ ಬರುವವರೆಗೂ ನನ್ನ ಕಂದಮ್ಮ ಕರುಳು ಚುಚ್ಚಿ ಚುರ್ರೆನ್ನುವಂತೆ ಕೂಗಿ ಕಿರುಚಿ ಚೀರಾಡುತ್ತಿದೆ. ಇಂಥ ಸಂಕಟಮಯ ಅನುಭವವನ್ನು ವರುಷಗಳುರುಳಿದರೂ ದಶಕಗಳು ಕಳೆದಿದ್ದರೂ ಮರೆಯಲಾದೀತೆ?

## ಬರಿದಾದ ಮಡಿಲು - ಕಣ್ಣೀರ ಕಡಲು

ಚಾಮರಾಜನಗರದಲ್ಲಿ ನಮ್ಮ ಬಿಡಾರ- ಆಗ ತಾನೇ ಕಟ್ಟಿದ, ಕೆಲವಷ್ಟೇ ಕೆಲಸ ಬಾಕಿಯಿದ್ದ ಹೊಸ ಕಟ್ಟಡವೊಂದರಲ್ಲಿ. ಅದಕ್ಕಿನ್ನೂ ಶಾಸ್ತ್ರೋಕ್ತ ವಾಸ್ತು ಪೂಜೆ, ಗೃಹಪ್ರವೇಶ ವಿಧಿಗಳು ಆಗಿರಲಿಲ್ಲ. ನಾಟಕದವರಿಗೆಂದರೆ ಆಗ ಸಿಗುತ್ತಿದ್ದುದೆಲ್ಲಾ ಅಂಥವೇ. ಬೇರೆಯವರಿಗೆ ಆಗದ - ಒಗ್ಗದ, ಬೇಡದ ಮನೆಗಳು ಕಂಪನಿಯವರಿಗೆ ತಾನೇ? ಮೊಕ್ಕಾಂ ಅವಧಿಗೆ ಮಾತ್ರ, ಅದೂ ಅಗ್ಗದ ಬಾಡಿಗೆಗೆ, ಬೇರೆ ಮನೆಗಳು ಎಲ್ಲಿ ಸಿಗಬೇಕು?

ಒಂದು ಸಂಜೆ;ನಾಟಕವಿಲ್ಲ. ಮಗುವನ್ನು ತೊಡೆಯ ಮೇಲೆ ಮಲಗಿಸಿಕೊಂಡು ಆಡಿಸುತ್ತಾ ಮನೆಯಲ್ಲಿ ಕುಳಿತಿದ್ದೇನೆ. ಆಟವಾಡುತ್ತಿದ್ದ ಮಗು ದಢಾರನೆ ತೊಡೆಯಿಂದ ಜಾರಿ ದುಡುಮ್ಮನೆ ಬಿದ್ದು ಬಿಟ್ಟಿತು. ಪೆಟ್ಟೂ ಜೋರಾಗಿಯೇ ತಟ್ಟಿದಂತಾಯಿತು. ನರವೇ ಹೊರಳಿತೋ, ಮೂಳೆಯೋ ಮುರಿಯಿತೋ, ಬರೀ ಉಳುಕೋ ಗೊತ್ತಾಗಲಿಲ್ಲ. ಅದಕ್ಕೆ ತಿರುಗಲೂ - ಹೊರಳಲೂ ಆಗದು. ಅವರಿವರನ್ನು ಜೊತೆ ಮಾಡಿಕೊಂಡು ಪಂಡಿತರೊಬ್ಬರ ಬಳಿ ಓಡಿಹೋದೆ. ಮೈ ತಡವಿದರು, ಮುಲಾಮು ಬಳಿದರು, ತೈಲ ಲೇಪಿಸಿದರು. ಏನಾದರೂ ಮೈ ಸಡಿಲ ಬಿಡಲಿಲ್ಲ, ಮಗುವಿನ ಬಾಧೆ ಕಡಿಮೆಯಾಗಲಿಲ್ಲ. ಕಿಟಾರೆಂದು ಅರಚಿ ಕರುಳು ಕಿತ್ತು ಬರುವ ಹಾಗೆ ಕರುಣಾಜನಕವಾಗಿ ಕಿರುಚುತ್ತಿತ್ತು. ಬಿಡಾರದ ಮನೆಯದೇ ದೋಷ-ಅವಲಕ್ಷಣ, ಅಪಶಕುನ ಎಂದೆಲ್ಲಾ ಗುಸು-ಗುಸು, ಪಿಸ-ಪಿಸ ನಡೆಸಿದ್ದರು ಸುತ್ತ-ಮುತ್ತಲವರು.

ಡಾಕ್ಟರಿಗೇ ತೋರಿಸೋಣವೆಂದು ಮೈಸೂರಿಗೆ ಧಾವಿಸಿದೆವು. ಅವರಿಂದ ಚಿಕಿತ್ಸೆ, ಆರೈಕೆ ಆರಂಭವಾಯಿತು. ಅವರು ಅಭಯವನ್ನೇನೋ ಕೊಟ್ಟರು. ಆದರೆ ಶುಶ್ರೂಷೆ ವಾರವಿಡೀ ಮುಂದುವರಿಯಬೇಕು, ಒಂದು ಗಳಿಗೆಯೂ ಬಿಡದ ಹಾಗೆ ತಾಯಿಯೇ ಜಾಗ್ರತೆಯಿಂದ ನೋಡಿಕೊಳ್ಳಬೇಕು ಎಂದು ಆದೇಶಿಸಿದರು. ನನ್ನ ಪರಿಸ್ಥಿತಿ ಮಾತ್ರ ಬೇರೆಯೇ ಇತ್ತು, ಆದರೆ ಹೇಳಿಕೊಳ್ಳುವ ಹಾಗೆ ಇರಲಿಲ್ಲ. ಕಂಪನಿಯಲ್ಲಿ ಮುಖ್ಯ ಪಾರ್ಟು ನಾನೇ ಮಾಡಬೇಕು. ಬೇರೆ ಯಾರೂ ಇಲ್ಲ, ಇತರ ಕಲಾವಿದರ ಸಂಖ್ಯೆಯೂ ಕಡಿಮೆ. ಒಬ್ಬರು

ಬಾರದೆ ಇದ್ದರೂ ಪರದೆ ಏಳುವಂತಿಲ್ಲ, ನಾಟಕವೇ ನಡೆಯುವಂತಿಲ್ಲ. ಅಂದ ಮೇಲೆ ಮುಂದಿನ ಕತೆ ಗೊತ್ತೇ ಇದೆಯಲ್ಲ? ನಾಟಕ ಆಡದಿದ್ದರೆ ಇಡೀ ನಾಟಕ ಕುಟುಂಬಕ್ಕೇ ಉಪಹಾರಕ್ಕೆ ಸಂಚಕಾರ, ಉಪವಾಸಕ್ಕೆ ಆಹ್ವಾನ. ಆಗಲೇ ಒಂದೊಂದು ದಿನ ನಾಟಕವಿಲ್ಲದ ಏಕಾದಶಿ- ಶಿವರಾತ್ರಿ ಒಟ್ಟೊಟ್ಟಿಗೇ ಆಚರಣೆಯಾಗಿರುತ್ತಿತ್ತು. ತುಂಬಾ ನಾಜೂಕಿನ, ನಾಚಿಕೆಯ ಪರಿಸ್ಥಿತಿ.

ಎಲ್ಲರ ಊಟಕ್ಕೂ ಕಲ್ಲು ಹಾಕಲು ಒಲ್ಲೆನೆಂದಿತು ಮನಸ್ಸು. ಮೈಸೂರಿನಲ್ಲಿ ನಿಲ್ಲದೆ, ಎದೆ ಗಟ್ಟಿ ಮಾಡಿಕೊಂಡು ಕ್ಯಾಂಪಿಗೆ ಮರಳಿ ಬಂದೆ. ಬಣ್ಣ ಬಳಿದುಕೊಂಡೆ, ದಿರಿಸು ಧರಿಸಿದೆ, ರಂಗ ಮಂಚವೇರಿದೆ. 'ನಗುನಗುತ್ತಲೇ' ನಟನೆ ಮಾಡಿದೆ. 'ಒನಪು- ಒಯ್ಯಾರ ಮೆರೆದೆ. ಹೇಳಿಕೊಟ್ಟ ಹಾಡು, ಪಾಠ ಮಾಡಿಸಿದ ನುಡಿ, ಕಲಿಸಿಕೊಟ್ಟ ನಡೆ- ನಿಲುವುಗಳನ್ನು ಚಾಚೂ ತಪ್ಪದಂತೆ ಒಪ್ಪಿಸಿದೆ. ಅಂತರಂಗದಲ್ಲಿ ಮಾತ್ರ ಅವಲಕ್ಕಿ ಕುಟ್ಟಿದಂತಾಗುತ್ತಿತ್ತು. ಹಾಗೂ - ಹೀಗೂ ಹತ್ತು ಹದಿನೈದು ದಿನಕ್ಕೆ ಚಾಮರಾಜನಗರ ಮೊಕ್ಕಾಂ ಮುಗಿಯಿತು.

ಹೊಸ ಆಸೆ- ಭರವಸೆ ಹೊತ್ತು ಬೆಂಗಳೂರಿಗೆ ಬಂದೆವು. ಕರುಳಿನ ಕುಡಿಯ ಆರೋಗ್ಯ ಪರಿಸ್ಥಿತಿ, ಆರೈಕೆ- ಶುಶ್ರೂಷೆ- ಚಿಕಿತ್ಸೆಯಿಲ್ಲದೆ ಸುಧಾರಿಸುವ ಹಾಗೆ ಇರಲಿಲ್ಲ. ಈ ವೇಳೆಗಾಗಲೇ ಮಗು ಬಳಲಿ ಬಸವಳಿದು, ಬೆಂಡಾಗಿತ್ತು. ಏನೋ ಎಂತೋ ಎಂದು ನನ್ನ ಹೃದಯ ಡವಡವ ಹೊಡೆದುಕೊಳ್ಳುತ್ತಿತ್ತು. ಅದರ ಚಿಕಿತ್ಸೆಗೆ ಔಷಧಿ ತಯಾರಿಸಲು ನಮ್ಮ ಅಜ್ಜಿ, ತಾವು ಕಂಡು ಕೇಳಿದ್ದ ಯಾವುದೋ ಒಂದು ಹಕ್ಕಿಯ ಮೂಳೆಯನ್ನು ತರಲೆಂದು ಶ್ರೀರಂಗಪಟ್ಟಣಕ್ಕೆ ಹೋದರು. ಆಗ 'ಧರ್ಮರತ್ನಾಕರ'ದ ಪ್ರಾಕ್ಟೀಸು. ನಾವಿಬ್ಬರೂ ಹೋಗಲೇಬೇಕಾಗಿತ್ತು. ಆಸ್ಪತ್ರೆಗೆ ಕರೆದೊಯ್ದೆವು. ಅಲ್ಲೊಂದಿಷ್ಟು ಶೀಘ್ರ ಶುಶ್ರೂಷೆಯೂ ಆಯಿತು. ಸೂಕ್ತ ಕಾಲದಲ್ಲಿ ಸಮರ್ಪಕ ಚಿಕಿತ್ಸೆ, ಸಾಕಷ್ಟು ಜಾಗರೂಕತೆ ಮಾಡದ್ದಕ್ಕಾಗಿ ವೈದ್ಯರಿಂದ ನಮಗೆ ಸಹಸ್ರನಾಮಾರ್ಚನೆಯೂ ಆಯಿತು. ಮತ್ತಷ್ಟು ಸಲಹೆ, ಸೂಚನೆ, ಔಷಧಿಗಳನ್ನು ಕೊಟ್ಟು ಕಳುಹಿಸಿದರು. ಆದರೆ ನಮ್ಮ ದುರಾದೃಷ್ಟದ ಬಟ್ಟಲು ತುಂಬಿ ಬಂದಿತ್ತೇನೋ? ಮಲಗಿದ್ದ ಹಾಗೇ ಮಗು ಕಣ್ಮುಚ್ಚಿ ಕೊನೆಯುಸಿರೆಳೆಯಿತು. ನನಗೋ ದುಃಖ ಉಮ್ಮಳಿಸಿ ಬಂತು. ಗೋಳಾಡಿದೆ. ಸಂಕಟದಿಂದ ಹೊರಳಾಡಿದೆ. ನನ್ನ ಮಗುವನ್ನು ನಾನೇ ಕೈಯಾರೆ ಕೊಂದೆನೆಂದು ನನ್ನನ್ನೇ ಶಪಿಸಿಕೊಂಡೆ. ನನ್ನ ಹಣೆಬರಹವನ್ನೇ ಹಳಿದುಕೊಂಡೆ. ಅತ್ತೆ.... ಅತ್ತೆ.... ಕಣ್ಣೀರಿನ ಒರತೆ ಬತ್ತುವವರೆಗೂ ಅತ್ತೆ. ಅಲವತ್ತುಕೊಂಡೆ. ತಲೆ ಚಚ್ಚಿಕೊಂಡೆ, ಎದೆ ಹೊಡೆದುಕೊಂಡೆ.

ನನ್ನಂತಹ ದುರ್ದೈವಿಗೆ ಮನ ಬಂದ ಹಾಗೆ ದುಃಖ - ದುಮ್ಮಾನ- ದುಗುಡವನ್ನು ವ್ಯಕ್ತಪಡಿಸಲು ವೇಳೆ- ವ್ಯವಧಾನ- ಸ್ವಾತಂತ್ರ್ಯವಾದರೂ ಎಲ್ಲಿ? ಮರುದಿನವೇ ಮತ್ತೊಂದು ನಾಟಕ. ಕಣ್ಣೀರೊರೆಸಿಕೊಂಡು ಎದ್ದೆ. ಅಳಲು ನಿಲ್ಲಿಸಿ ಬಣ್ಣ ಬಳಿಸಿಕೊಳ್ಳಲು ಮತ್ತೆ



ಅಣಿಯಾದೆ. ನನ್ನ ಮತ್ತು ಕಂದನ ಋಣಾನುಬಂಧ ಇದ್ದದ್ದೇ ಇಷ್ಟೆಂದು ಒಣ ಸಮಾಧಾನ ಪಟ್ಟುಕೊಂಡೆ. ರಂಗದ ಮೇಲಾಗಲೀ, ಜೀವನ ರಂಗದಲ್ಲಾಗಲೀ ನಟನೆಯೋ- ನರ್ತನವೋ, ನಡೆಯಬೇಕಾದ್ದು ಸೂತ್ರಧಾರನ ಅಪ್ಪಣೆ- ಆಣತಿಯಂತೆ ಮಾತ್ರ. ಅದಕ್ಕೆ ಮಣಿಯಬೇಕಾದುದಷ್ಟೇ ನಮ್ಮ ಹೊಣೆ ಎಂಬ ದಿವ್ಯ ಸತ್ಯವನ್ನು ಮರುಕ್ಷಣವೇ ಮನಗಂಡೆ.

ಮೊದಲೇ ಹೇಳಿದ ಹಾಗೆ ಅದು ನನ್ನ ಹುಟ್ಟು ಗುಣ- ಒಬ್ಬರಿಗೆ ಒಂದು ಮಾತು ಕೊಟ್ಟ ಮೇಲೆ ಆಯಿತು. ಪ್ರಾಣ ಹೋದರೂ ಸರಿಯೇ ಅದನ್ನು ಉಳಿಸಿಕೊಳ್ಳಲೇಬೇಕು. ಅದಕ್ಕಾಗಿ ಯಾವ ತ್ಯಾಗಕ್ಕೂ ಸಿದ್ಧಳಿರಲೇಬೇಕು. ನಾಟಕದಲ್ಲಿ ಮಾಡುತ್ತೇನೆಂದ ಮೇಲೆ ನನಗೆ ಎಷ್ಟೇ ಕಷ್ಟ - ನಷ್ಟ - ನಿಷ್ಠುರವಾಗಲಿ ಪಾರ್ಟು ಮಾಡಲೇಬೇಕು, ಆಟ ಕಟ್ಟಲೇ ಬೇಕು, ನಾಟಕ ನಡೆಯಲೇ ಬೇಕು. ನನ್ನಿಂದಾಗಿ ಇನ್ನೊಬ್ಬರಿಗೆ ಕಷ್ಟವಾಗುವುದನ್ನು ನಾನು ಅಂದೂ ಇಷ್ಟಪಡುತ್ತಿರಲಿಲ್ಲ, ಇಂದಿಗೂ ಅಷ್ಟೇ. ಹಲವಾರು ಮಂದಿಗೆ ತೊಂದರೆ ಆಗದಿರಲೆಂದು ಮಗುವಿನ ಸ್ಥಿತಿ ದಾರುಣವಾಗಿದ್ದರೂ, ನನ್ನ ಮಾತು ಉಳಿಸಿಕೊಂಡು ನಾಟಕವಾಡಲು ಹೋದೆ. ಮಗುವಿನ ಮರಣವೇ ಸಂಭವಿಸಿತು. ನನ್ನ ತಾಯಿ, ಬಂಧು-ಬಾಂಧವರೆಲ್ಲ ನನ್ನನ್ನು ಬೈದರು, ಮೂದಲಿಸಿದರು. 'ನಾಟಕಕ್ಕೋಸ್ಕರ ನಿನ್ನ ಮಗುವನ್ನೇ ಬಲಿಕೊಟ್ಟೆ' ಎಂದು ದೂಷಿಸಿದರು. ನಾನದನ್ನು ಒಪ್ಪಲಿಲ್ಲ. ಇದೆಲ್ಲಾ 'ನನ್ನ ಕರ್ಮ ಅಷ್ಟೇ' ಎಂದುತ್ತರಿಸಿ ನನ್ನ ಅಳಲು ಎಷ್ಟೇ ಇದ್ದರೂ ಅವರನ್ನೇ ಸಂತೈಸಲು ಯತ್ನಿಸಿದೆ.

ನಾಟಕವೆನ್ನುವುದು ಮಿಲಿಟರಿ ಸೇವೆ ಇದ್ದಹಾಗೆ. ಮಗನನ್ನು ಸೈನ್ಯಕ್ಕೆ ಸೇರಿಸಿ, ಸಮರ ಭೂಮಿಗೆ ಕಳಿಸಿಯಾದ ಮೇಲೆ ಮುಗಿಯಿತು. ಮತ್ತೆ ಅವನನ್ನು ಸುಲಭವಾಗಿ ಒಳ್ಳೆಯದಕ್ಕೂ ಅಪೇಕ್ಷಿಸುವಂತಿಲ್ಲ; ಕೆಟ್ಟದ್ದಕ್ಕೂ ನಿರೀಕ್ಷಿಸುವಂತಿಲ್ಲ. ಹಾಗೆಯೇ, ರಂಗ ಕಲಾವಿದ. ಸುಖವೆಂದು ಸುಮ್ಮಾನ ಪಡುತ್ತಾ, ದುಃಖವೆಂದು ದುಮ್ಮಾನಪಡುತ್ತಾ ಸುಮ್ಮನೆ ಕೂಡುವಂತಿಲ್ಲ. ಎರಡನ್ನೂ ಸಮಭಾವದಿಂದ ಸ್ವೀಕರಿಸಿ ಮುಂದಿನ ಆಟಕ್ಕೆ ಬಣ್ಣ ಬಳಿದುಕೊಳ್ಳಲೇ ಬೇಕು, ವೇಷ ಧರಿಸಲೇ ಬೇಕು. ಇದೇ ಕಟು ಸತ್ಯ, ನಟನ ಪಾಲಿನ ಪಥ್ಯ!

•

## ಕಂಪನಿಯಿಂದ ಕಂಪನಿಗೆ

ಮಗುವನ್ನು ಕಳೆದುಕೊಂಡ ದುಗುಡ ಕಾಲ ಕಳೆದಂತೆ ಕಡಿಮೆಯಾಯಿತು. ಆ ದುಃಖವನ್ನು ಕುಗ್ಗಿಸಲೋ ಎಂಬಂತೆ ಒಂದು ವರ್ಷದ ಬಳಿಕ ೧೯೪೯ರಲ್ಲಿ ನಮಗೊಂದು ಗಂಡು ಮಗುವಾಯಿತು. ಅದನ್ನು ಅಕ್ಕರೆಯಿಂದ ವಿಜಯ್ ಎಂದು ಕರೆದೆವು. ಮೊದಲಿನಂತೆ ಹೆಂಗೆಯಾದ ಮೂರು ತಿಂಗಳಿಗೆಲ್ಲಾ ಮತ್ತೆ ರಂಗ ಹತ್ತಿದೆ. ಮರುವರ್ಷವೇ ಅಂದರೆ ೧೯೫೦ರಲ್ಲಿ ಮತ್ತೊಂದು ಹೆಣ್ಣು ಮಗು ಮಾಲತಿಯ ಜನನ. ನಮ್ಮ ಎಲ್ಲ ಮಕ್ಕಳೂ ಹುಟ್ಟಿದ್ದು, ಶೇಷಾಚಾರ್ ಕಂಪನಿಯಲ್ಲಿ ಸೇವೆಯಲ್ಲಿದ್ದಾಗಲೇ. ಮಕ್ಕಳು ಸ್ವಲ್ಪ ದೊಡ್ಡವರಾದೊಡನೆಯೇ ನಮ್ಮಮ್ಮನ ಮಡಿಲಿಗೆ ಹಾಕಿ ರಂಗಮಂಟಪಕ್ಕೆ ಮರಳಿ ಬಂದು ಬಿಡುತ್ತಿದ್ದೆ.

ಶೇಷಕಮಲ್ ಕಲಾಮಂಡಲಿಗಾಗಲೇ ಶನಿಕಾಟ ಶುರುವಾಗಿತ್ತು. ಜನ ನಾಟಕವನ್ನು ನೋಡಿ ಹಾಡಿ ಹೊಗಳುತ್ತಿದ್ದರು. ಆದರೆ ಗಲ್ಲಾ ಪೆಟ್ಟಿಗೆ ತುಂಬುತ್ತಿರಲಿಲ್ಲ. ಅಂದ ಮೇಲೆ ಅದರಲ್ಲಿದ್ದವರ ಹೊಟ್ಟೆ ತುಂಬೀತು ಹೇಗೆ? ಹೊಸ ಪೇಟೆಗೆ ಹೋದರೂ ಹಳೆಯ ಕಥೆಯೇ, ಹಣದ ಮುಖ ನೋಡಲಿಲ್ಲ. ಅಲ್ಲೊಂದು ದಿನ 'ಎಚ್ಚಮನಾಯಕ'. ಜಟಕಾಬಂಡಿಯಲ್ಲಿ ಹೋಗಿ ಬೀದಿ ಬೀದಿಯಲ್ಲೂ ಟಾಂ ಟಾಂ ಹೊಡೆಸಿದ್ದೆವು, ಚೀಟಿ ಹಂಚಿದ್ದೆವು. ನಾಟಕದ ಸಮಯವೂ ಸಮೀಪಿಸಿದೆ. ಮಹಾ ಜನಗಳ ಸುಳಿವೇ ಇಲ್ಲ. ಮೊದಲ ಗಂಟೆ ಬಾರಿಸುವ ವೇಳೆಗೆ ಖರ್ಚಾಗಿದ್ದ ಟಿಕೆಟ್‌ಗಳು ಏಳೇ ಏಳು. ಸಭಾಂಗಣ ಭಣಭಣಗುಡುತ್ತಿದೆ. ನೋಡುಗರೇ ಇಲ್ಲದೆ ನಾಟಕ ಆಡುವುದು ಹೇಗೆ ? ಯಾರಿಗೆ? ರಂಗಕಲಾವಿದರ ಸ್ಫೂರ್ತಿ, ಸಂಪತ್ತೇ ಅದು: ಜನ ಗಿಜಿಗುಟ್ಟುತ್ತಿರಬೇಕು. ಮಾಡಿದ ನಟನೆಗೆ, ಆಡಿದ ಮಾತಿಗೆ, ಹಾಡಿದ ಹಾಡಿಗೆ ತತ್‌ಕ್ಷಣವೇ ಸ್ಪಂದಿಸಬೇಕು. ನಟನಾವೈಖರಿಗೆ, ವಾಗ್ವಿಲಾಸಕ್ಕೆ, ಗಾನವೈಭವಕ್ಕೆ ತಲೆದೂಗಬೇಕು. ಚಪ್ಪಾಳೆಯಿಂದಲೇ ನಾಟಕಕ್ಕೆ ಚೇತನ, ನಟರಿಗೆ ಚೈತನ್ಯ. ಜನರೇ ಇಲ್ಲದ ಅವರಿಗೆ ಬೇಕಿಲ್ಲದ ಪ್ರದರ್ಶನವೆಂದರೆ ಅದು ಅರಣ್ಯರೋದನವೇ ಸರಿ.

ಕಲಾರಸಿಕರ ಹಾಜರಿಯೇ ಇಲ್ಲದ್ದರಿಂದ ಕಲಾವಿದರೆಲ್ಲರೂ ಇಂದಿನ ಆಟ ಕ್ಯಾನ್ಸಲ್ ಆದಂತೆಯೇ ಎಂದು ತೀರ್ಮಾನಿಸಿದರು. ಆದ್ದರಿಂದ ಯಾರೂ ಬಣ್ಣ ಹಚ್ಚಿಕೊಳ್ಳದೇ ಅಲ್ಲಿ ಇಲ್ಲಿ ಅಡ್ಡಾಡುತ್ತಿದ್ದರು. ಶೇಷಾಚಾರ್ಯರು ದಡದಡನೇ ಬಂದರು. "ಏಕೆ ಎಲ್ಲರೂ ಹೀಗೆ ಸುಮ್ಮನೆ ಅಲೆದಾಡುತ್ತಿದ್ದೀರಿ? ನಾಟಕದ ವೇಳೆ ಆಯಿತಲ್ಲ? ಬೇಗ - ಬೇಗ ಡ್ರೆಸ್ಸು, ಮೇಕಪ್ಪು ಮಾಡಿಕೊಳ್ಳಿ" ಎಂದು ತರದೂದು ಮಾಡಿದರು. ನಾನು 'ಜನವೇ ಇಲ್ಲವಲ್ಲ ಶೇಷಾಚಾರ್ರೇ, ಯಾರಿಗೇಂತ ನಾಟಕವಾಡೋದು?' ಎಂದೆ. ಕಲೆಕ್ಷನ್ ಆಗದ್ದರಿಂದ ಮೊದಲೇ ವ್ಯಾಕುಲಗೊಂಡಿದ್ದ ಶೇಷಾಚಾರ್‌ರಿಗೆ ನನ್ನ ಮಾತಿನಿಂದ ಸರ್ರನೇ ಕೋಪ ಬಂತು. ಗಾಯಕ್ಕೆ ಉಪ್ಪು ಸವರಿದ ಹಾಗಾಗಿರಬೇಕು ಅವರಿಗೆ. 'ಯಾರೇ ಬರಲಿ, ಯಾರೇ ಬಿಡಲಿ, ನಾಟಕವಂತೂ ಆಡಲೇ ಬೇಕು. ಜನವಿಲ್ಲದಿದ್ದರೆ ಕುರ್ಚಿಗಳಿಗೇ ನಾಟಕ ಆಡೋಣ' ಎಂದರು. ನನಗೂ ಕೋಪ ಬಂತು: 'ಏನೂಂತ ಮಾತಾಡ್ತೀರಾ ಶೇಷಾಚಾರ್ರೇ? ನಾಟಕ ನೋಡಕ್ಕೆ ಒಂದಿಷ್ಟಾದರೂ ಜನ ಬೇಡವೇ? ಕುರ್ಚಿ- ಬೆಂಚು- ಕಂಬ- ಕಿಟಕಿ ಅಂತ ಅವಕ್ಕೆಲ್ಲಾ ನಾಟಕ ಮಾಡೋಕಾಗುತ್ಯೇ? ಖರ್ಚು- ವೆಚ್ಚ ನೋಡಬೇಡವೇ, ಆಗೋದಿಲ್ಲ' ಎಂದು ಮಾರುತ್ತರ ಕೊಟ್ಟೇಬಿಟ್ಟೆ. ಸಹಕಲಾವಿದರೂ ನನ್ನೊಟ್ಟಿಗೇ ಹೂಗುಟ್ಟಿದರು. ಅದೊಂದು ವಿಷಗಳಿಗೆಯೇ ಇರಬೇಕು! ಶೇಷಾಚಾರ್ ಎಂದರೆ ನನಗೆ ಎಷ್ಟೊಂದು ಗೌರವ, ಆದರ ಇತ್ತು? ಅಂಥದರಲ್ಲಿ ಅದೇಕೋ ಅವತ್ತು ಅವೆಲ್ಲಾ ಏಕಾಏಕಿ ಮರೆಯಾದವು. ಅವರಿಗೂ ನನ್ನ ಮೇಲಿದ್ದ ಪ್ರೀತಿ - ವಿಶ್ವಾಸ ಕರಗಿ ಹೋದವು. ವಾದ- ವಿವಾದಕ್ಕೇ ಬೆಳೆಯಿತು. ಇಷ್ಟಾದ ಮೇಲೆ ಅಂದಿನ ನಾಟಕ ನಡೆಯುವುದಾದರೂ ಹೇಗೆ? ನಿಂತೇ ಹೋಯಿತು. ಅಂದು ಮೊದಲಾದ ವಿರಸ ದಿನದಿನಕ್ಕೂ ಅಧಿಕವಾಗುತ್ತಲೇ ಹೋಯಿತು. ಹಲವಾರು ವಾಗ್ವಾದ, ವಾಗ್ಯುದ್ಧಗಳ ಪುನರಾವರ್ತನೆಯಾಗುತ್ತಲೇ ಬಂತು.

ನಮಗೇನೋ ಇನ್ನು ಆ ಕಂಪನಿಯಲ್ಲಿ ಮುಂದುವರಿಯುವುದು ಸರಿ ಕಾಣಲಿಲ್ಲ. ಆದರೂ ಮೊಕ್ಕಾಂ ಮಧ್ಯದಲ್ಲೇ ಬಿಡಬಾರದೆಂದು, ಅಸಮಾಧಾನ ಅಸಂತೋಷಗಳನ್ನು ಅದುಮಿಟ್ಟು ಅಡಗಿಸಿಕೊಂಡಿದ್ದೆವು. ಕ್ಯಾಂಪ್ ಮುಗಿದೊಡನೆಯೇ ಶೇಷಾಚಾರ್‌ಗೆ ನಮ್ಮ ನಿರ್ಧಾರ ತಿಳಿಸಿ, ನಮಸ್ಕಾರ ಸಲ್ಲಿಸಿ, ಕಂಪನಿ ಬಿಟ್ಟು, ಗಂಟು ಕಟ್ಟಿಕೊಂಡು ಬೆಂಗಳೂರಿಗೆ ಬಂದು ಬಿಟ್ಟೆವು. ಇಷ್ಟಾದರೂ ಶೇಷಾಚಾರ್ಯರೊಂದಿಗೆ ನಮ್ಮ ಸ್ನೇಹ -ಸಲಿಗೆ ಕೊನೆಗೊಳ್ಳಲಿಲ್ಲ. ನಾವು ನೋಡಬೇಕೆನಿಸಿದಾಗಲೆಲ್ಲ ಭೇಟಿಯಾಗುತ್ತಿದ್ದೆವು. ಭೇಟಿಯಾದಾಗೆಲ್ಲ ಹಿಂದಿನ ವಿರಸದ ಲವಲೇಶವೂ ಇಲ್ಲದಂತೆ ನೈಜ ವಿಶ್ವಾಸದಿಂದ, ನಗು ಮೊಗದಿಂದ ಮಾತು - ಕತೆ, ಊಟ- ಉಪಚಾರ ಮಾಡುತ್ತಿದ್ದೆವು.

ಬೆಂಗಳೂರಿಗೆ ನಾನು ಬಂದದ್ದು ಗೊತ್ತಾಗಿ ಹಲವಾರು ಹವ್ಯಾಸಿ ನಾಟಕ ಸಂಸ್ಥೆಗಳು, ಕಾರ್ಖಾನೆ- ಕಛೇರಿಗಳ ಕಾರ್ಮಿಕ ಕಲ್ಯಾಣ ಮತ್ತು ಮನರಂಜನಾ ಸಂಘಗಳು ನಾಟಕಗಳಲ್ಲಿ ಪಾತ್ರ ಮಾಡಲು ಕರೆಯುತ್ತಿದ್ದರು. ಬಿನ್ನಿಮಿಲ್ ಸಂಘದವರು ಆಡಿದ 'ರಕ್ತ ಕಣ್ಣೀರು' ನಾಟಕದ ಅಭಿನಯಕ್ಕಾಗಿ ಆ ಕಾಲದಲ್ಲಿ ಸ್ಥಾಪಿಸಲಾಗಿದ್ದ ಗುಬ್ಬಿ ವೀರಣ್ಣನವರ ಹೆಸರಲ್ಲಿ

'ಸಂಸಾರ ನೌಕೆ' ನಾನು ಅತಿ ಹೆಚ್ಚು ಬಾರಿ ಆಡಿದ ಇರಿಸಿದ್ದ ರಜತ ಪದಕ ಗಳಿಸಿದೆ. 'ಸಂಸಾರ ನೌಕೆ' ನಾನು ಅತಿ ಹೆಚ್ಚು ಬಾರಿ ಆಡಿದ ನಾಟಕ. ಹಲವಾರು ಸಂಸ್ಥೆಗಳಲ್ಲಿ ಪಾತ್ರ ವಹಿಸುವುದಲ್ಲದೆ ಬೇರೆ ಸಹಾಯ- ಸಹಕಾರ ನೀಡುತ್ತಿದ್ದೆ. ಸಹಾಯಾರ್ಥ ಪ್ರದರ್ಶನಗಳಲ್ಲೂ ಪಾತ್ರ ವಹಿಸುತ್ತಿದ್ದೆ.

ನಂತರ 'ವರದಾಚಾರ್ ಸ್ಮಾರಕ ನಾಟಕ ಸಂಸ್ಥೆ'ಗಾಗಿಯೂ ಹಲವಾರು ನಾಟಕಗಳಲ್ಲಿ ಪಾತ್ರವಹಿಸಿದೆ. ಮಹಾನ್ ಕಲಾವಿದರಾಗಿದ್ದ ವರದಾಚಾರ್ಯರನ್ನು ಮುಖತಃ ಭೇಟಿಮಾಡಿ, ಮಾತಾಡುವ ಭಾಗ್ಯ ನನಗಿರಲಿಲ್ಲ. ಅವರ ಕುರಿತು ತುಂಬಾ ಕೇಳಿ ತಿಳಿದಿದ್ದೆ; ಅಭಿಮಾನ ತಳೆದಿದ್ದೆ. ಬಡ - ಬಗ್ಗರ ಬಗ್ಗೆ ಅವರಿಗಿದ್ದ ಕರುಣೆ- ಕಾಳಜಿ- ಕಳಕಳಿಯನ್ನಂತೂ ಬಹಳ ಮಂದಿ ನನ್ನ ಮುಂದೆ ಬಣ್ಣಿಸಿದ್ದರು. ಅವರ ಅಪೂರ್ವ ಪ್ರತಿಭೆ- ಕಲಾ ಕೌಶಲಗಳಂತೂ ಬೇರೆ ನಾಟಕದ ಮನೆಗಳಲ್ಲೂ ದಿನದಿನದ ಮಾತಾಗಿತ್ತು. ಅವರ ಬಗ್ಗೆ ಇನ್ನೂ ಒಂದು ಕುತೂಹಲದ ಸಂಗತಿ ಜನಜನಿತವಾಗಿತ್ತು. ಅವರಿಗೆ ಬಾಲ್ಯದಿಂದಲೂ ಬಿಕ್ಕುವ ದೋಷವಂತೆ, ಸಾಮಾನ್ಯವಾಗಿ ಮಾತಾಡುವಾಗ ಹಿಡಿಹಿಡಿದು ತಡವರಿಸಿ ಮಾತಾಡುತ್ತಿದ್ದರಂತೆ. ಆದರೆ ರಂಗದ ಮೇಲೆ ಬರುತ್ತಿದ್ದ ಹಾಗೆ ಪವಾಡವೋ ಎಂಬಂತೆ ನಿರರ್ಗಳವಾಗಿ ಸಂಭಾಷಣೆಗಳನ್ನು ಹೇಳುತ್ತಿದ್ದರಂತೆ! ಅದಕ್ಕೆಂದೇ ಒಂದು ವಿಶಿಷ್ಟ ವಾಕ್- ಶೈಲಿಯನ್ನು ತಾವೇ ರೂಪಿಸಿಕೊಂಡು, ರೂಢಿಸಿಕೊಂಡಿದ್ದರಂತೆ. ಹಾಗಾಗಿ ಬಿಕ್ಕಲನ್ನು ಬಗ್ಗು ಬಡಿವ ತಂತ್ರವನ್ನು ಸಿದ್ಧಿಸಿಕೊಂಡಿದ್ದರಂತೆ.

ನನ್ನ ರಂಗಾಭಿನಯ, ಬೆಂಗಳೂರಿನಲ್ಲಿ ಹೀಗೆ ಬಿಡಿ- ಬಿಡಿಯಾಗಿಯೇ ನಡೆದಿತ್ತು. ಸಾಕಷ್ಟು ಬಿಡುವೂ ಸಿಗುತ್ತಿತ್ತು. ಆದರೆ ಸಂಪಾದನೆ ಮಾತ್ರ ಸಾಲದು. ಅಮ್ಮನ ಜೊತೆಯಲ್ಲಿ ಬೆಂಗಳೂರಲ್ಲೇ ಇದ್ದುದರಿಂದ ಬಂದುದರಲ್ಲಿಯೇ ಹೇಗೋ ಸಂಭಾಳಿಸುತ್ತಿದ್ದೆ.

## ಹೃದಯ ಹೊನ್ನಾದರೇನು- ಕಿವಿ ಹಿತ್ತಾಳೆ!

ಆಗ ಹಿರಣ್ಣಯ್ಯನವರ ಕಂಪನಿಯೂ ಬೆಂಗಳೂರಿನಲ್ಲೇ ಬೀಡು ಬಿಟ್ಟಿತ್ತು. ಒಂದು ದಿನ ಅವರ ಕಡೆಯಿಂದ ನನಗೊಂದು ಕರೆಬಂತು. "ನಮ್ಮ ನಾಯಕ ನಟಿ ಬಳ್ಳಾರಿ ಲಲಿತಮ್ಮನವರು ಗರ್ಭಿಣಿಯಾದ್ದರಿಂದ ನಾಟಕಗಳಲ್ಲಿ ಪಾತ್ರ ಮಾಡುತ್ತಿಲ್ಲ. ಅವರಿಂದ ತೆರವಾದ ಸ್ಥಾನ ತುಂಬಲು ನೀವು ನಮ್ಮ ಕಂಪನಿ ಸೇರಬೇಕು" ಸರಿ, ನಾನು ಮತ್ತು ಯಜಮಾನರು ಆ ತಂಡಕ್ಕೆ ಪುನಃ ಸೇರ್ಪಡೆಗೊಂಡೆವು.

ಹಿರಣ್ಣಯ್ಯನವರು ಆಗ ಪ್ರಯೋಗಕ್ಕೆಂಬಂತೆ ಬೆಳಗಿನ ಆಟಗಳನ್ನೂ ಆರಂಭಿಸಿದ್ದರು. ಆದರೆ ಉದ್ಯೋಗಿಗಳಿಗಾಗಲಿ, ಉದ್ದಿಮೆದಾರರಿಗಾಗಲೀ ಬಿಡುವೆಂದರೆ ಸಂಜೆ- ರಾತ್ರಿಯ ವೇಳೆ ತಾನೇ? ಬೆಳಗಿನಿಂದ ಬೈಗಿನವರೆಗೆ ದುಡಿದವರಿಗೆ ಮನರಂಜನೆ ಎಂದರೆ ಸಂಜೆ ಕಳೆದ ಮೇಲೇ. ಹೀಗಾಗಿ ಬೆಳಗಿನ ಆಟಗಳಿಗೆ ಜನರೇ ಇಲ್ಲ. ಹಿರಣ್ಣಯ್ಯನವರ ಪ್ರಯೋಗ ಯಶ ಕಾಣಲಿಲ್ಲ. ಅದಕ್ಕೆ ವಾರಕ್ಕೆ ಎರಡು ಬಾರಿ ಶನಿವಾರ, ಭಾನುವಾರ ಮಾತ್ರ ಬೆಳಿಗ್ಗೆ ನಾಟಕ ಆಡುತ್ತಿದ್ದರು.

ಈ ಮಧ್ಯೆ 'ಸತಿ ಅನಸೂಯ' ನಾಟಕವನ್ನು ಬೆಂಗಳೂರಿನಲ್ಲೇ ಪ್ರಾರಂಭಿಸಿದರು. ಇದರಲ್ಲಿ ಹಿರಣ್ಣಯ್ಯನವರದು ನಾರದನ ಪಾತ್ರ. ನಮ್ಮ ಯಜಮಾನರು ಅತ್ರಿ ಮಹರ್ಷಿ. ನಾನು ಅನಸೂಯೆ. ಜೀವನದಲ್ಲಿ ಹೇಗೆ ಅನುರಾಗದ ದಾಂಪತ್ಯವೋ ಹಾಗೆ ರಂಗದ ಮೇಲೆ ಅನುಪಮ ಜೋಡಿ. ಪ್ರಧಾನಪಾತ್ರಗಳೆರಡೂ ನಮ್ಮವೇ. ಅದಕ್ಕನುಗುಣವಾಗಿ ಪ್ರಶಂಸೆ- ಪ್ರಾಶಸ್ತ್ಯಗಳು ನಮಗೇ ಸಲ್ಲುತ್ತಿತ್ತು. ನಮ್ಮ ಕೆಲಸ ನಾವು ನೋಡಿಕೊಂಡು ನಿಷ್ಠೆ - ನಮ್ರತೆಯಿಂದ ಇರುತ್ತಿದ್ದೆವು. ಆದರೂ ನಮ್ಮ ಏಳಿಗೆಯನ್ನು ಕಂಡರಾಗದ ಕೆಲ ಮಂದಿ ಕಂಪನಿಯಲ್ಲಿದ್ದರು. ಹಿರಣ್ಣಯ್ಯನವರೊಂದಿಗೆ ನಮಗಿದ್ದ ಆಪ್ತತೆ- ಆತ್ಮೀಯತೆಯಿಂದ ತಮ್ಮ ಬೇಳೆ ಬೇಯದೆಂದು ಅವರಿಗೆ ಅಸಂತೋಷ, ಅಸಮಾಧಾನ. ಹೀಗಾಗಿ ಹಗೆ ಹೊಗೆಯಾಡುತ್ತಲೇ ಇತ್ತು.

ಹಿರಣ್ಣಯ್ಯನವರು ತುಂಬಾ ಒಳ್ಳೆಯ ಮನುಷ್ಯರು. ವಿದ್ಯಾವಂತರು, ಬುದ್ಧಿವಂತರು, ಸಹಾಯಶೀಲರು. ಎಲ್ಲಾ ಸರಿ. ಆದರೆ ಅವರದು ತುಸು ಹಿತ್ತಾಳೆ ಕಿವಿ. ಚಾಡಿ ಮಾತುಗಳಿಗೆ ಬೇಗ ಓಗೊಡುವ, ಹೂಂಗುಡುವ ದೌರ್ಬಲ್ಯ. ಯಾರು - ಯಾರು, ಏನು- ಏನು ಹೇಳಿದರೋ? ನಮ್ಮ ವಿಷಯದಲ್ಲಿ ಅವರಿಗೆ ವಿಶ್ವಾಸ - ನಂಬುಗೆ ತಗ್ಗಿತು, ಗುಮಾನಿ- ಅನುಮಾನ ಹಿಗ್ಗಿತು. ನಮ್ಮನ್ನು ಕಂಪನಿಗೆ ಕರೆಸಿಕೊಳ್ಳುವಾಗ ಇದ್ದ ಆದರ- ಅಭಿಮಾನ ಕುಗ್ಗಿತು. ಇಷ್ಟಕ್ಕೂ ಆ ವೇಳೆಗೆ ಬಳ್ಳಾರಿ ಲಲಿತಮ್ಮನೂ ಬಾಣಂತನ ಮುಗಿಸಿಕೊಂಡು ಬರುವವರಿದ್ದರು. ನನ್ನ ಅಗತ್ಯವೂ ಅಷ್ಟಾಗಿ ಇರಲಿಲ್ಲ. ಎಲ್ಲವೂ ಸೇರಿತು. ನಮ್ಮ ಮೇಲೆ ಅಕಾರಣವಾಗಿ, ಅನವಶ್ಯಕವಾಗಿ ಆವೇಶ- ಆಕ್ರೋಶ ತೋರತೊಡಗಿದರು.

ನಮಗೂ ಸಹನೆಯ ಕಟ್ಟೆಯೊಡೆಯಿತು. ನಮ್ಮ ಯಜಮಾನರು 'ಸ್ವಾಮೀ, ನಿಮಗೆ ನಾವಿಲ್ಲಿರೋದು ಇಷ್ಟ ಇಲ್ಲಾಂತ ಕಾಣುತ್ತೆ. ಅಂದ ಮೇಲೆ ನಮಗೆ ಒಂದು ನಿಮಿಷವೂ ಇರೋದಕ್ಕೆ ಇರಾದೆ ಇಲ್ಲ. ನಮ್ಮ ದಾರಿ ನಾವು ನೋಡಿಕೊಳ್ತೀವಿ. ನೀವೂ ನೆಮ್ಮದಿಯಾಗಿರಿ. ನಮ್ಮ- ನಿಮ್ಮ ಸ್ನೇಹಕ್ಕೆ ಹುಳಿ ಹಿಂಡಿದವರೂ ಹಾಯಾಗಿರಲಿ' ಎಂದು ಹೇಳಿಯೇ ಬಿಟ್ಟರು. ಬಹಳ ನೋವಿನಿಂದಲೇ ಕಂಪನಿ ಬಿಟ್ಟೆವು. ನಮಗೋ ಕಷ್ಟಕಾಲ. ಒಂದು ಒಂದೂವರೆ ತಿಂಗಳ ಸಂಬಳ ಬೇರೆ ಬಾಕಿ ಬರಬೇಕಾಗಿತ್ತು. ಅದನ್ನು ಕೇಳಲೂ ನಮಗೆ ಇಷ್ಟವಾಗಲಿಲ್ಲ; ಕೊಟ್ಟು ಕಳಿಸುವಷ್ಟು ದೊಡ್ಡತನವನ್ನು ಅವರೂ ತೋರಲಿಲ್ಲ. ಕಂಪನಿಯ - ನಮ್ಮ ಸಂಬಂಧ, ಋಣಾನುಬಂಧ ಇಷ್ಟೇ ಎಂದುಕೊಂಡು ಹೊರಬಂದೆವು. ಎರಡು ವರ್ಷಗಳ (೧೯೫೩-೧೯೫೪) ನಮ್ಮ ಸಂಪರ್ಕ ಕಡಿದುಹೋಯಿತು. ಹಿರಣ್ಣಯ್ಯನವರಂತಹ ಹಿರಿಯ ವ್ಯಕ್ತಿ ನಮ್ಮ ಬಗ್ಗೆ ತೋರಿದ್ದಂತೂ ಕಿರಿತನ. ನಮಗದರಿಂದ ಆದದ್ದು ಕಿರಿಕಿರಿ, ಕಿರುಕುಳ. ಏನು ಮಾಡುವುದು?ಚಾಡಿಮಾತಿಗೆ ಮನಸೋಲುವವರ, ಮರಳಾಗುವವರ ಸಹವಾಸ ಮಾಡಿದವರ ಸ್ಥಿತಿಯೇ ಹಾಗೆ - ಮರುಕ ತೋರಬೇಕಾದಂಥದು.

ಇಡೀ ಕುಟುಂಬದ ಹೊಟ್ಟೆಪಾಡಿಗೆ ದಾರಿಯಾಗಿದ್ದ ಉದ್ಯೋಗವನ್ನು ಇಬ್ಬರೂ ಒಟ್ಟಿಗೆ, ಹಠಾತ್ತನೆ ಕಳೆದುಕೊಂಡಿದ್ದೆವು. ಆ ತಿಂಗಳು ಇಬ್ಬರಿಗೂ ಸಂಬಳ ಬೇರೆ ಇಲ್ಲ. ನಾವು ಪಟ್ಟ ಕಷ್ಟ ಅಷ್ಟಿಷ್ಟಲ್ಲ. ಹೊಟ್ಟೆ ಮೇಲೆ ಒದ್ದೆ ಬಟ್ಟೆಯೇ ಗತಿ ಎನ್ನುವಂಥ ಪರಿಸ್ಥಿತಿ. ಮನೆಗೆ ಬಂದು ದೇವರ ಮುಂದೆ ಕುಳಿತು ಇಬ್ಬರೂ ಮನಸಾರೆ ಅತ್ತು ಬಿಟ್ಟೆವು. ಹುಟ್ಟಿಸಿದ ದೇವರು ಹುಲ್ಲು ಮೇಯಿಸದೇ ಬಿಟ್ಟಾನೆಯೇ? ನಂಬದೆ ಕೆಟ್ಟರೂ ಕೆಡಬಹುದು. ನಂಬಿದ ನಾವಂತೂ ಕೆಡಲಿಲ್ಲ ಬಿಡಿ. ದೇವರು ದಯಮಾಡಿದ, ದಾರಿ ತೋರಿದ. ಕೆಲದಿನಗಳಲ್ಲೇ ನನಗೆ ಮತ್ತೆ ಕಲಾವಿಲಾಸಿ ತಂಡಗಳಿಂದ ಒಂದಾದ ಮೇಲೊಂದು ಕರೆ. ನನ್ನವರಿಗೆ ಮಾತ್ರ ಸರಿಯಾದ ಕೆಲಸ ದೊರಕಲಿಲ್ಲ. ಇಬ್ಬರ ಪಗಾರ ಬಂದರೂ ಸಂಸಾರ ತೂಗಿಸುವುದು ಪ್ರಯಾಸವೇ



ಆಗಿತ್ತು. ಅಂಥದರಲ್ಲಿ ಒಬ್ಬರ ಸಂಬಳಕ್ಕೆ ಸಂಪೂರ್ಣ ಸಂಚಕಾರವಾದರೆ ನಮ್ಮ ಪೇಚಾಟ, ಪರದಾಟ ಹೇಗಿರಬೇಕು? ಹೇಗೋ ಸಂಭಾಳಿಸುತ್ತಲೇ ಸಂಸಾರ ರಥ ಎಳೆಯುತ್ತಿದ್ದೆವು.

ನಾವು ಬಿಟ್ಟ ಮೇಲೆ ಹಿರಣ್ಣಯ್ಯ ಮಿತ್ರ ಮಂಡಲಿ ಮಡಿಕೇರಿಯಲ್ಲಿ ಕ್ಯಾಂಪ್ ಹೂಡಿತ್ತೆಂದು ತಿಳಿದು ಬಂದಿತ್ತು. ಅಲ್ಲೂ ಕಲೆಕ್ಷನ್ ಕುಂಠಿತವಾಗಿ, ಸಾಕಷ್ಟು ನಷ್ಟ ಉಂಟಾಗಿ ಕಂಪನಿ ಕುಂಟತೊಡಗಿತ್ತು ಎಂದೂ ಸುದ್ದಿ ಇತ್ತು. ಇದನ್ನು ಮೆಟ್ಟಿ ನಿಲ್ಲುವಂಥ ಕಟು- ಕಠೋರ ಕೆಟ್ಟ ಸುದ್ದಿಯೂ ಬೇಗನೇ ಬಂತು. ಹಿರಣ್ಣಯ್ಯನವರು ಹಠಾತ್ ಕಣ್ಮುಚ್ಚಿದ್ದರು! ಮಹಾನ್ ಕಲಾವಿದನೊಬ್ಬ ಜೀವನ ನಾಟಕದಿಂದಲೇ ನಿರ್ಗಮಿಸಿದ್ದರು. ನಿಜ, ಕೆಲವರ ಕೈವಾಡದಿಂದ ನಮ್ಮ- ಹಿರಣ್ಣಯ್ಯನವರ ಮಧ್ಯೆ ಒಡಕು ಮೂಡಿತು. ಆದರೆ ನಮಗೆ ಅವರೆಂದೆಂದಿಗೂ ಪೂಜನೀಯರೇ. ಕಾರಣ ಹಲವಾರು ಕಾಲ ನಮಗೆ ಅವರು ಆಸರೆಯಾಗಿದ್ದವರು. ಪ್ರೀತಿ- ವಿಶ್ವಾಸ ತೋರಿದ್ದವರು.

ಹಿರಣ್ಣಯ್ಯನವರು ಬಾಲ್ಯದಿಂದಲೇ ಬಲು ಕಷ್ಟದಿಂದ ಬೆಳೆದು ಬಂದವರು. ತನ್ನ ಸ್ವಂತ ಬಲದಿಂದಲೇ ತಲೆಯೆತ್ತಿ ನಿಂತವರು. ತೊಂದರೆ, ತಾಪತ್ರಯಗಳಲ್ಲಿ ಬಳಲುತ್ತಿದ್ದ ಅನೇಕ ಕಲಾಜೀವಿಗಳನ್ನು ಕೈ ಹಿಡಿದು ಮೇಲೆತ್ತಿದವರು. ಅವರ ಧರ್ಮಪತ್ನಿ ಶಾರದಮ್ಮನವರು, ಮಗ ನರಸಿಂಹಮೂರ್ತಿ ಎಳವೆಯಲ್ಲಿದ್ದಾಗಲೇ ಅವರನ್ನು ಅಗಲಿದ್ದರು. ಪತ್ನಿವಿಯೋಗದಿಂದ ಬಳಲಿದ್ದರೂ ಮರು ಮದುವೆಯಾಗದೆ, ಹಿರಣ್ಣಯ್ಯನವರು ಮಗನ ಪಾಲನೆಗಾಗಿ ಶ್ರಮಿಸುತ್ತಿದ್ದರು. "ರಂಗಭೂಮಿಯ ಸಂಪರ್ಕ- ಸಹವಾಸವೇ ಅವನಿಗೆ ಕೂಡದು. ಆತ ಚೆನ್ನಾಗಿ ಓದಿ- ಬರೆದು ವಿದ್ಯಾವಂತನಾಗಿ ದೊಡ್ಡ ಅಧಿಕಾರಿಯಾಗಿ ನೆಮ್ಮದಿಯಿಂದಿರಲಿ" ಎಂಬುದು ಅವರ ಹಂಬಲ. ರಂಗಭೂಮಿಗೆ ಮಗ ಬರುವುದು ಸುತರಾಂ ಇಷ್ಟವಿರಲಿಲ್ಲ. 'ಮೂರ್ತಿಯನ್ನು ಥಿಯೇಟರ್ ಹತ್ತಿರವೇ ಸೇರಿಸಬೇಡಿ' ಎಂದು ತಮ್ಮ ಸುತ್ತ - ಮುತ್ತಲವರಿಗೆಲ್ಲಾ ತಾಕೀತು ಮಾಡಿದ್ದರು. ಆದರೆ ಮಗನ ಹಣೆಬರಹ ತಿದ್ದಲು ಅವರಾರು? ಕೊನೆಗೂ ಆ ಮಗ ರಂಗವನ್ನೇ ಹತ್ತಿದ, ತಂದೆಯನ್ನೇ ಸರಿಗಟ್ಟುವಂಥ, ಅವರ ಹೆಸರನ್ನು ಮರೆಸದೇ, ಮೆರೆಸುವಂಥ ಮೇರು ನಟನಾದ. ನಾಟಕಕಾರನಾದ, ನಿರ್ದೇಶಕನಾದ! ಮಾಸ್ಟರ್ ಹಿರಣ್ಣಯ್ಯನೆಂದೇ ದೇಶ- ವಿದೇಶಗಳಲ್ಲಿ ಖ್ಯಾತನಾದ.

ಕನ್ನಡ ರಂಗಭೂಮಿಗೆ ಹಿರಿಯ ಹಿರಣ್ಣಯ್ಯನವರ ಕೊಡುಗೆ ಅಪಾರ, ಅಮೂಲ್ಯ. ಸಮಾಜದ ಓರೆ- ಕೋರೆ ತಿದ್ದಬಲ್ಲಂಥ ಪರಿಣಾಮಕಾರಿ ನಾಟಕಗಳು ಅವರ ಲೇಖನಿಯಿಂದ ಹೊರಬಿದ್ದವು. ಅಷ್ಟೇ ಪ್ರಭಾವಶಾಲಿಯಾಗಿ ಅವರ ನಿರ್ದೇಶನದಲ್ಲಿ ಅವು ಪ್ರದರ್ಶಿತವಾಗುತ್ತಿದ್ದವು. ಅವರ ಹರಿತ ಸಂಭಾಷಣೆಗಳು ಸಮಾಜಕ್ಕೆ ನೇರವಾಗಿ ಮುಟ್ಟುತ್ತಿದ್ದವು. ಜನರ ಮನ ತಟ್ಟುತ್ತಿದ್ದವು. ಅಷ್ಟೇ ಅಲ್ಲ- ಸಂಬಂಧಿಸಿದವರಿಗೆ ಚುರುಕು ಮುಟ್ಟಿಸುವಂಥದೂ, ಸಮಾಜ ದ್ರೋಹಿಗಳಿಗೆ ಚಾಟಿಯೇಟಿನ ಪೆಟ್ಟು ಕೊಡುವಂಥವೂ ಆಗಿರುತ್ತಿದ್ದವು. 'ದೇವದಾಸಿ' ಇದಕ್ಕೊಂದು ಅಭೂತಪೂರ್ವ ಉದಾಹರಣೆ.

'ರಾಮರಾಜ್ಯ'ದಲ್ಲಿ ರಾಮ-ರಾವಣರ ಸಮರಕ್ಕೆ ಮುನ್ನ ಸೀತೆ ಮತ್ತು ಮಂಡೋದರಿ ಒಟ್ಟಿಗೆ ಕಾಳಿಕಾ ಪ್ರಾರ್ಥನೆ ಸಲ್ಲಿಸುವ ಹೃದಯಸ್ಪರ್ಶಿ ಸನ್ನಿವೇಶವಂತೂ ಅವರ ಅದ್ಭುತ ಕಲ್ಪನಾಶಕ್ತಿಯ ಕಲಾಸೃಷ್ಟಿ!

ಏನೆಲ್ಲ ಸೃಜನಶೀಲತೆ ಇದ್ದರೂ, ದುಡ್ಡು ಮಾಡುವ ಕಲೆ ಮಾತ್ರ ಈ ಅಪ್ರತಿಮ ಕಲೆಗಾರನಿಗೆ ಕೊನೆಗೂ ಒಲಿಯಲೇ ಇಲ್ಲ. ಹೆಸರು-ಕೀರ್ತಿ ಮಾತ್ರ ಬಂತು, ನೆರೆಯಲ್ಲಿ ಹರಿದಂತೆ. ಹೀಗಾಗಿ ಮಗನಿಗೆ ಅವರು ಬಿಟ್ಟು ಹೋದ ಪಿತ್ರಾರ್ಜಿತ ಆಸ್ತಿ ಅದೊಂದೇ. ಅವನಿಗೆ ಶ್ರೀರಕ್ಷೆಯಾದುದೂ ಅದೇ. ಹಿರಣ್ಣಯ್ಯನವರಿಂದ ರಂಗಭೂಮಿಗೆ ಇನ್ನೂ ಬಹು ವಿಧದ, ಬಹು ವರ್ಷಗಳ ಸೇವೆ ಸಲ್ಲಬೇಕಾಗಿತ್ತು. ಆದರೆ ಕನ್ನಡ ಕಲಾ ಪ್ರಪಂಚದ ನಷ್ಟ, ದುರದೃಷ್ಟ, ಅವರು ನಡುಗಾಲದಲ್ಲೇ ನಮ್ಮನ್ನೆಲ್ಲಾ ಅಗಲಿ ಹೋದರು. ಆ ಸುದ್ದಿ ಕೇಳಿ ಇಡೀ ನಾಡಿನಾದ್ಯಂತ ನಮ್ಮಂಥ ಕಲಾ ಬಂಧುಗಳ, ಕಲಾಪ್ರೇಮಿಗಳ ಕಣ್ಣೀರ ಕೋಡಿಯೇ ಹರಿಯಿತು.

## ಶಿಸ್ತಿನ ಸಿಪಾಯಿಯ ಕಲಾ ಸಾಮ್ರಾಜ್ಯಕ್ಕೆ

ಕಲಾವಿದರ ಬಾಳಿಗೂ, ಅಲೆಮಾರಿ ಜನಾಂಗದ ಬದುಕಿಗೂ ಅಂಥಾ ವ್ಯತ್ಯಾಸವೇನಿಲ್ಲ. ಇವತ್ತೊಂದು ಕಂಪನಿ, ನಾಳೆ ಮತ್ತೊಂದು. ಈ ತಿಂಗಳು ತಂಗಲು ಇಲ್ಲಿ ಬಿಡಾರ, ಮುಂದಿನ ತಿಂಗಳು ಇನ್ನೆಲ್ಲೋ ಗುಡಾರ! ಹೊಸ - ಹೊಸ ಕಂಪನಿ, ಹೊಸ ಹೊಸ ಜನ- ಜಾಗ- ಜೊತೆಗಾರರು. ನಿಶ್ಚಿತ ನೆಲೆಯಿಲ್ಲ, ನಿಶ್ಚಿಂತ ಜೀವನವಿಲ್ಲ, ನಿಯತ ವರಮಾನವಿಲ್ಲ. ನಿರಾಳ ಮನವಿಲ್ಲ. ಸಂಬಳ ನೆಚ್ಚುವಂಥದಲ್ಲ, ಉಂಬಳ ನಂಬುವಂಥದಲ್ಲ. ಕಂಪನಿಯ ಕ್ಯಾಂಪೊಂದರಲ್ಲಿ ಕಲೆಕ್ಷನ್ ಕೈ ಕೊಟ್ಟರೆ, ಮಾಲೀಕರ ಕೃಪಾ ಕಟಾಕ್ಷ ತಪ್ಪಿದರೆ, ಕೂಡಲೇ ಅಲ್ಲಿಂದ ಕಾಲ್ತೆಗೆಯಬೇಕು. ಮುಂದಿನೂರಿನಲ್ಲಿ- ಕಂಪನಿಯಲ್ಲಿ ಕಾಲೂರುವ ತನಕ, ಕಲೆಕ್ಷನ್ ಕುದುರುವ ತನಕ ಕೈ ತುಂಬ ಕೆಲಸವೂ ಇಲ್ಲ, ಕಾಸೂ ಇಲ್ಲ, ಕವಳವೂ ಇಲ್ಲ. ಇದೇ ಕಲಾವಿದನ ಬಾಳು, ಯಾವ ಅಲೆಮಾರಿಗೆ ಕಡಿಮೆಯಾದುದು ಈ ಗೋಳು!? ಎರಡು, ಮೂರು ವರುಷಗಳ ಕಾಲ ಹೀಗೇ ಕಳೆಯಿತು(೧೯೫೪-೫೭)

ಕಂಪನಿಗಳ ಏಳು - ಬೀಳು, ಆಯಾ ಯಜಮಾನರ ಜಾಯಮಾನ- ಮರ್ಜಿಗಳಿಗೆ ಹೊಂದಿಕೊಳ್ಳುವುದೇ ಒಂದು ಕಸರತ್ತು. ಆಗಾಗ ಸಹ ಕಲಾವಿದರ ಅಸಹನೆ- ಅಸೂಯೆಯಿಂದ ಪಿತೂರಿ, ಅದರಿಂದಾಗಿ ಕಿರಿಕಿರಿ. ಇವೆಲ್ಲವನ್ನೂ ನಾನು ಸಾಕಷ್ಟು ಕಂಡೆ, ಉಂಡೆ, ಬೇಸರಗೊಂಡೆ. ಆದರೂ ಸಹಿಸಿಕೊಂಡೆ. ಕಂಪನಿಯಿಂದ ಕಂಪನಿಗೆ ಅಲೆದಾಡಿದೆ. ಹೀಗಾಗಿ ವೃತ್ತಿ ಕಂಪನಿಗಳ ಸಹವಾಸವೇ ಇನ್ನು ಬೇಡ ಎಂದು ಒಂದಷ್ಟು ದಿನ ಕಾಲದೂಡಿದೆ. ಆದರೆ ಕಲಾವಿಲಾಸಿ ಸಂಸ್ಥೆಗಳಲ್ಲಿ ತಾನೇ ಎಷ್ಟು ದಿನ ಕೆಲಸವಿದ್ದೀತು? ಅಲ್ಲೊಂದು- ಇಲ್ಲೊಂದು ಬಿಡಿ ನಾಟಕಗಳು. ಅದರಲ್ಲಿ ನನ್ನ ದುಡಿಮೆ. ನಡುನಡುವೆ ಪುಟ್ಟ, ದೊಡ್ಡ ಬಿಡುವು. ಹೊಟ್ಟೆ, ಪಾಡಿಗೆ, ಬಟ್ಟೆ - ತೊಡಿಗೆಗೆ, ಕಣ್ಣು- ಬಾಯಿ ಬಿಡುವಂತಾಗುತ್ತಿತ್ತು.

ಪಿಟೀಲು ಶಂಕರಪ್ಪನವರು ನಮ್ಮ ಕುಟುಂಬದ ಹಿತಚಿಂತಕರು. ನಮ್ಮ ಅವಸ್ಥೆಯನ್ನು, ಅಸಹಾಯಕತೆಯನ್ನು ಹತ್ತಿರದಿಂದ ಕಂಡಿದ್ದವರು. ಶ್ರೀ ಸುಬ್ಬಯ್ಯನಾಯ್ಡು ಅವರ 'ಶ್ರೀ

ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಲಿ'ಯಲ್ಲಿ ಅವರು ಪಿಟೀಲುವಾದಕರಾಗಿದ್ದರು. ನಾವು ಮತ್ತೆ ಕಂಪನಿ ಕೆಲಸಕ್ಕೆ ಸೇರುವಂತೆ ಅವರು ಒತ್ತಾಯ ಮಾಡುತ್ತಲೇ ಇದ್ದರು.

೧೯೫೭ರಲ್ಲಿ ಒಂದು ದಿನ ಶಂಕರಪ್ಪನವರು ಒಡೆಯ ಸುಬ್ಬಯ್ಯನಾಯ್ಡು ಅವರಿಗೆ ನನ್ನನ್ನು ಪರಿಚಯ ಮಾಡಿಸಿದರು. ಅವರೂ ನನ್ನ ಹೆಸರು, ಮಾಡುತ್ತಿದ್ದ ಪಾತ್ರಗಳ ಕುರಿತು ಅಲ್ಲಲ್ಲಿ ಒಳ್ಳೆ ಮಾತು ಕೇಳಿದ್ದರಂತೆ. ಹೀಗಾಗಿ ನಾಯ್ಡು ಅವರೇನೋ ನನಗೆ ಕೆಲಸ ಕೊಡಲು ಕೂಡಲೇ ಒಪ್ಪಿದರು. ಆದರೆ ಗೊತ್ತು ಮಾಡಿದ ಪಗಾರ ಮಾತ್ರ ತುಂಬಾ ಕಡಿಮೆ. ತಿಂಗಳಿಗೆ ನೂರಾ ಇಪ್ಪತ್ತು. ಅವರ ಕಂಪನಿಯಲ್ಲಿ ಆಗ ಅದೇ ಹೆಚ್ಚಿನ ಸಂಬಳ. ನಾನೂ ಚೌಕಾಸಿ ಮಾಡುವಂತಿರಲಿಲ್ಲ. ತೆಪ್ಪಗೆ ಒಪ್ಪಿಕೊಂಡೆ. ನನ್ನ ತಂಗಿ ಮಂಜುಳೆಯನ್ನೂ ಕರೆದುಕೊಂಡು ಅವರ ಶಿವಮೊಗ್ಗ ಕ್ಯಾಂಪಿಗೆ ಹೋದೆ.

ಸುಬ್ಬಯ್ಯ ನಾಯ್ಡು ಅವರೋ 'ಶಿಸ್ತಿನ ಶಿವಪ್ಪ ನಾಯಕ', 'ಮಿಲ್ಟ್ರಿಮಾವ'! ಎಲ್ಲ ಕಲಾವಿದರೂ, ಕೆಲಸಗಾರರೂ ಕಾಲಕ್ಕೆ ಸರಿಯಾಗಿ, ಕರಾರುವಾಕ್ಕಾಗಿ ಹಾಜರಿರಬೇಕು. ಕೆಲಸದ ಮೇಲಿರುವಾಗ ಬೇರೆ ಧ್ಯಾನವಿರಬಾರದು. ಯಾರಿಗೂ, ಯಾವತ್ತೂ ರಿಯಾಯಿತಿ ಇಲ್ಲ. ದುಡ್ಡು - ಕಾಸಿಗಿಂತ, ದುಡಿಮೆ- ಸಮಯ ಪಾಲನೆಗೆ ಬೆಲೆ ಹೆಚ್ಚು ಎಂಬುದು ಅವರ ದೃಢ ನಂಬಿಕೆ. 'ಐದು ನಿಮಿಷ ತಡವಾದರೂ ಐದು ರೂಪಾಯಿ ದಂಡ' ಎಂದು ಹೆದರಿಸುತ್ತಿದ್ದರು. ಆದರೆ ಹಾಗೆ ದಂಡ ವಸೂಲು ಮಾಡಿದ್ದನ್ನು ನಾನೆಂದೂ ಕಂಡರಿಯೆ. ಅಂದರೆ ಅವರು ಆ ವಿಷಯದಲ್ಲಿ ರಿಯಾಯಿತಿ, ವಿನಾಯಿತಿ ನೀಡಿದರೆಂದಲ್ಲ. ಸರ್ವೇಸಾಮಾನ್ಯವಾಗಿ ಎಲ್ಲ ಕಲಾವಿದರೂ ಸ್ವಭಾವದಿಂದಲೋ, ಸ್ವಇಚ್ಛೆಯಿಂದಲೋ, ದಂಡದ ಗಂಡಾಂತರಕ್ಕೆ ತಲೆಯೊಡ್ಡಬಾರದೆಂದೋ, ಸಮಯಪಾಲನೆಯನ್ನು ಹಾಗೂ ಹೀಗೂ ಸಿದ್ಧಿಸಿಕೊಂಡಿದ್ದರು.

ಕಂಪನಿ ಬಿಡಾರಗಳಲ್ಲಿ ಸಾಮಾನ್ಯವಾಗಿ ಸ್ನಾನದ ಮನೆಗಳ ಸಂಖ್ಯೆ ಕಡಿಮೆಯೇ. ಬೆಳಗಾಯಿತೆಂದರೆ ಅವುಗಳ ಮುಂದೊಂದು ದೊಡ್ಡ ಸರತಿಯ ಸಾಲು. ಸ್ನಾನಕ್ಕೆಂದು ಕ್ಯೂನಲ್ಲಿ ಕಾದು ನಿಂತು ಸಮಯ ಮೀರಿ ಬಿಟ್ಟರೆ ಎಂಬ ಸಂಶಯ, ನಾಯ್ಡುಗಳ ಸಿಟ್ಟಿಗೆ ಸಿಲುಕಬೇಕಾದೀತೆಂಬ ಭಯ. ಹೀಗಾಗಿ ಅನೇಕರು ಸ್ನಾನ ಕೂಡ ಮಾಡದೆ ಅಭ್ಯಾಸಕ್ಕೆ ಬಂದು ಬಿಡುತ್ತಿದ್ದರು! ಆ ಕಂಪನಿಯಲ್ಲಿ ನನ್ನ ತಮ್ಮ ಪರಮಶಿವನ್ ಹಾರ್ಮೋನಿಯಂ ಕಲಾವಿದ. ಯಾವತ್ತೂ ಅವನು ಗೊತ್ತಾದ ಸಮಯಕ್ಕೆ ಹತ್ತು ನಿಮಿಷ ಮುಂಚಿತವಾಗಿಯೇ ಬಂದಿರುತ್ತಿದ್ದ. ಅದರಿಂದಾಗಿ ನಾಯ್ಡುಗಳ ಪ್ರೀತಿಗೆ ಪೂರ್ಣಪಾತ್ರನಾಗಿ ಬಿಟ್ಟಿದ್ದ.

ನಾಯ್ಡುಗಳು 'ವಜ್ರಾದಪಿ ಕಠೋರಾಣಿ, ಮೃದೂನಿ ಕುಸುಮಾದಪಿ' ಜಾಯಮಾನದವರು. ಕಲಾವಿದರು ಸರಿಯಾಗಿ ಅಭ್ಯಾಸ-ಅಭಿನಯ ಮಾಡದಿದ್ದರೆ ದೂರ್ವಾಸರಂತೆ ದೂಷಣೆ. ಒಪ್ಪವಾಗಿ, ಒಪ್ಪುವಂತೆ ನಟಿಸಿದರೆ ಶಭಾಶ್ ಗಿರಿ, ಭಕ್ಷೀಸು. 'photo ಗಲಾಟೆ' ಎಂಬ ಹೊಚ್ಚ ಹೊಸ ನಾಟಕದ ಅಭ್ಯಾಸ ಆಗ ತಾನೇ ಶುರುವಾಗಿತ್ತು.



ಅದರಲ್ಲಿ ನನ್ನ ಸಂಭಾಷಣಾ ಶೈಲಿ ಕೇಳಿದ ನಾಯ್ಡುಗಳಿಗೆ ಮಹಾಸಿಟ್ಟು. "ಏನು ನಾಗಮ್ಮ, ಪುರಾಣದ ನಾಟಕದಲ್ಲಿ ಮಾತಾಡಿದ ಹಾಗೆ ಆಡ್ತೀಯಲ್ಲ. ಸಾಮಾಜಿಕ ಎಂದರೆ ಸಂಭಾಷಣೆಯಲ್ಲಿ ಸಹಜತೆ, ಜೀವಂತಿಕೆ ತುಂಬಿರಬೇಕು. ಮನೆಯೋರ ಜೊತೆ, ಸ್ನೇಹಿತರ ಜೊತೆ ಮಾತಾಡೋ ಹಾಗಿರಬೇಕು. ನಾಟಕೀಯತೆ ಇಲ್ಲದೆ ಮನಮುಟ್ಟುವ ಹಾಗೆ ಸರಳವಾಗಿ, ನೇರವಾಗಿ ಮಾತಾಡಬೇಕು. ರಾಗ, ಕೊಂಕು ಏನೊಂದೂ ಇರಕೂಡದು" ಎಂದು ತಿದ್ದಿ ತಿದ್ದಿ ಅವರು ಹೇಳಿಕೊಟ್ಟಿದ್ದು ಇನ್ನೂ ನನ್ನ ಕಿವಿಯಲ್ಲಿ ಗುಂಯ್‌ಗುಟ್ಟುವ ಹಾಗಿದೆ. ಕಂಪನಿಯ ಆಡಳಿತ ನಿಭಾಯಿಸುವುದರಲ್ಲೋ ಅವರು ತುಂಬಾ ಅಚ್ಚುಕಟ್ಟು, ಕಟ್ಟು ನಿಟ್ಟು. ತಮ್ಮ ಕಲಾಬಳಗವಿರಲಿ, ಬಳಿಗೆ ಬಂದವರೆಲ್ಲರೊಡನೆಯೂ ತುಂಬಾ ಸಂಭಾವಿತತನದ, ಗಾಂಭೀರ್ಯದ ನಡೆ- ನುಡಿ. ಕಂಪನಿ ನಡೆಸುವುದು ಹೇಗೆಂದು ಅವರನ್ನು ನೋಡಿ ತಿಳಿಯಬೇಕು. ಅಷ್ಟು ಸಮರ್ಥ ನೇತೃತ್ವ. ಸಂಬಳವೇನೋ ಆಗಿನ ಹಲವಾರು ಕಂಪನಿಗಳಿಗಿಂತ ಕಮ್ಮಿ. ಆದರೆ ಗೊತ್ತು ಮಾಡಿದ್ದನ್ನು ಮಾತ್ರ ತಡಮಾಡದೆ, ಕಡಿಮೆ ಮಾಡದೆ, ನಿಶ್ಚಿತ ದಿವಸ ಶತಾಯ- ಗತಾಯ ಚುಕ್ತಾ ಮಾಡಿಬಿಡುವರು. ಅವರಲ್ಲಿ ಯಾವಾಗಲೂ ತಮಗೆ ಬರಬೇಕಾದ ಬಾಕಿಪಟ್ಟಿ ಇರುತ್ತಿತ್ತೇ ಹೊರತು, ತಾವು ತೀರಿಸಬೇಕಾದ ಬಾಕಿ ಎಂಬುದೇ ಇರುತ್ತಿರಲಿಲ್ಲ. ನಾನು ಹಲವು ಹತ್ತು ಕಂಪನಿಗಳಲ್ಲಿ ಕೆಲಸ ಮಾಡಿದೆ. ಅವರಂತೆ ಸಂಬಳವನ್ನು ಸರಿಯಾದ ದಿನಕ್ಕೆ, ಸಬೂಬು ಹೇಳದೇ ಸಂಪೂರ್ಣವಾಗಿ ಕೊಡುತ್ತಿದ್ದವರು ಅಪರೂಪವೇ.

ನಾಯ್ಡು ಅವರು ನನ್ನನ್ನು ಕಂಪನಿಗೆ ಸೇರಿಸಿಕೊಂಡದ್ದು ಎರಡನೇ ನಾಯಕಿ ಪಾತ್ರಕ್ಕೆ. ಕಂಪನಿಯ ಎಲ್ಲ ನಾಟಕಗಳ ನಾಯಕಿ ಪಟ್ಟ ಮಾತ್ರ ಯಾವಾಗಲೂ ಅವರ ತಾರಾಪತ್ನಿ ಲಕ್ಷ್ಮೀಬಾಯಿಯವರಿಗೇ ಕಟ್ಟಿಟ್ಟದ್ದು. ಅವರಿಗೋ, ಆಗಲೇ ಪ್ರಾಯ ಮೀರುತ್ತಾ ಬಂದಿತ್ತು. ಆದರೂ ತಾವೇ ನಾಯಕಿಯಾಗಿರಬೇಕೆಂಬ ಚಪಲ- ಹಂಬಲ. ನಾಯಕ ನಟ ಕಿರಿಯನಿರಲಿ, ತರುಣನಿರಲಿ ಅವರೇ ಜೋಡಿ, ಜೊತೆ! ತಮ್ಮ ಹಿರಿಯ ವಯಸ್ಸಿಗೆ ಹರೆಯದ ದಿರಿಸುಗಳು, ರಾಣಿ- ರಾಜಕುಮಾರಿಯ ಪಾತ್ರಗಳು ಸರಿಹೊಂದವು ಎಂಬ ವಾಸ್ತವವನ್ನು ಒಪ್ಪುವ ಅರಿವು, ಉದಾರತೆ ಅವರಿಗೆ ಇರಲಿಲ್ಲ. ಚಿರಯವ್ವನೆಯೆಂಬಂತೆ ಅವೇ ಪಾತ್ರಗಳನ್ನು ವಹಿಸುತ್ತಿದ್ದರು. ಇದನ್ನು ಯಾರಾದರೂ ಅವರ ಗಮನಕ್ಕೆ ತಂದದ್ದೇ ಆದರೆ, ಆ ತೆರನ ನಾಯಕಿ ಪಾತ್ರವಿರುವ ನಾಟಕಗಳೇ ರದ್ದಾಗಿ ಬಿಡುತ್ತಿದ್ದವು. ಇಲ್ಲವೇ ಮಾರ್ಪಾಡಾಗಿ ಬಿಡುತ್ತಿದ್ದವು. ಅಷ್ಟೇ ಹೊರತು, ಆ ಪಾತ್ರಗಳು ಮಾತ್ರ ಬೇರೆಯವರ ಪಾಲಿಗೆ ದೊರಕುತ್ತಿರಲಿಲ್ಲ. ಅಂತೂ ಇಂತೂ ಕುಂತೀ ಪುತ್ರರಿಗೆ ರಾಜ್ಯವಿಲ್ಲ, ಎಂಬಂತೆ ನಾಯಕಿ ಪಟ್ಟ ನನ್ನ ಪಾಲಿಗೆ, ನನ್ನಂಥ ಹಲವರಿಗೆ ಕನಸಿನ ಗಂಟೇ ಆಗಿತ್ತು.

ಒಮ್ಮೆ ನಾಯ್ಡು ಅವರ ಆಪ್ತ ಸ್ನೇಹಿತ ಗುರುಶಾಂತಪ್ಪ, ಈ ವಿಷಯವನ್ನು ಅವರೊಂದಿಗೇ ಪ್ರಸ್ತಾಪಿಸಿದರಂತೆ. "ನೀನು ಯಾಕಪ್ಪ, ಅವರ ಕೈಲಿ ರಾಧೆಯ ಪಾತ್ರ

ಮಾಡಿಸುತ್ತೀ? ಆ ವಯಸ್ಸಿಗೆ- ವೇಷ ಭೂಷಣಕ್ಕೆ ಅವರು ಸ್ವಲ್ಪವೂ ಒಪ್ಪೋದಿಲ್ಲ. ಅವರಿಗೆ ತಕ್ಕಂಥ ಪಾತ್ರ ಕೊಡಬಾರದೇ?'' ಎಂದು ಪ್ರಶ್ನಿಸಿಯೇ ಬಿಟ್ಟರಂತೆ. ಆಗ ನಾಯ್ಡು ''ಅದಕ್ಕೆ ಅವಳೆಲ್ಲಯ್ಯಾ ಒಪ್ಪುತ್ತಾಳೆ? ನಾಯಕಿ ಪಾತ್ರ ತನಗೇ ಮೀಸಲು; ತಾನೇ ಹುಟ್ಟು ರಾಜಕುಮಾರಿ- ರಾಣಿ ಅಂತ ತಿಳ್ಕೊಂಡು ಬಿಟ್ಟಿದ್ದಾಳಲ್ಲಾ'' ಎಂದು ತಮ್ಮ ಅಸಹಾಯಕತೆ ತೋಡಿಕೊಂಡರಂತೆ. ಕಂಪನಿಯಲ್ಲಿ ಎಲ್ಲರನ್ನೂ ನಡುಗಿಸಿ ಬಿಡುತ್ತಿದ್ದ ನಾಯ್ಡುರವರು ಮುದ್ದಿನ ಮಡದಿಗೆ ಮಾತ್ರ ಮಣಿದಿದ್ದರು.

ಯಾವ ಕಲಾವಿದನಿಗಾದರೂ, ಅಷ್ಟೆ ಏಕೆ, ಯಾವ ವ್ಯಕ್ತಿಗಾದರೂ ಆತ್ಮವಿಶ್ವಾಸ ಅತಿಯಾಗಿ, ಸ್ವಾಭಿಮಾನ ಮಿತಿ ಮೀರಿದರೆ, ಬೇರೆಯವರ ಸಾಮರ್ಥ್ಯದ ಬಗ್ಗೆ ಅಪನಂಬಿಕೆ ತಾನಾಗಿಯೇ ಮೂಡಿಬಿಡುತ್ತದೆ. ತಾನು ಮಾಡಬಲ್ಲ ಕೆಲಸವನ್ನು ಮತ್ತಾರೂ ತನ್ನಂತೆ ಉತ್ತಮವಾಗಿ ಮಾಡಲಾರರೆಂಬ ಅನುಮಾನ, ತಾನದನ್ನು ಯಾವ ಕಾಲಕ್ಕೂ ಸಮರ್ಪಕವಾಗಿಯೇ ಮಾಡುತ್ತಿರುತ್ತೇನೆಂಬ ಅತಿ ವಿಶ್ವಾಸ! ಆಗ ಬೇರೆ ಎಲ್ಲ ಪರಿಜ್ಞಾನ ಮರೆಯಾಗುತ್ತದೆ. ತಾನದಕ್ಕೆ ತಕ್ಕವನೇ? ಜನ ಮೆಚ್ಚುತ್ತಾರೆಯೇ? ಎಂಬುದೂ ಹೊಳೆಯದು. ಲಕ್ಷ್ಮೀಬಾಯಿಯವರ ವಿಷಯದಲ್ಲಿ ಆದುದೂ ಹಾಗೆ. ಇದೊಂದನ್ನು ಬಿಟ್ಟರೆ ಲಕ್ಷ್ಮೀಬಾಯಿ ಬಂಗಾರದಂಥ ಹೆಂಗಸು, ಸ್ನೇಹಜೀವಿ, ಸಂಭಾವಿತೆ. ಎಲ್ಲರ ಸುಖ ದುಃಖವನ್ನೂ ವಿಚಾರಿಸುವರು, ಅದರಲ್ಲಿ ಪಾಲುಗೊಳ್ಳುವರು. ತಮ್ಮ ಕೈಲಾದ ಸಹಾಯವನ್ನು ಮಾಡುವರು.

ಈಗ ಕಣ್ಮರೆ ಆಗಿದ್ದರೂ ಕನ್ನಡಿಗರೆಲ್ಲರ ಕಣ್ಮಣಿಯೇ ಆಗಿರುವ ಡಾ.ರಾಜ್‌ಕುಮಾರ್ ಕೂಡಾ ಆ ಕಾಲಕ್ಕೆ ಸುಬ್ಬಯ್ಯನಾಯ್ಡು ಕಂಪನಿಯಲ್ಲಿ ಪ್ರಮುಖ ಕಲಾವಿದ. ಆಗ ಅವರು 'ಮುತ್ತುರಾಜು' ಮಾತ್ರ. ಎಲ್ಲರ ಪ್ರೀತಿ, ಅಭಿಮಾನಗಳಿಗೆ ಪಾತ್ರರಾಗಿ 'ಮುತ್ತುರಾಜಣ್ಣ'ಎಂದು ಕರೆಸಿಕೊಳ್ಳುತ್ತಿದ್ದರು. ಅವರದು ಎರಡನೇ ನಾಯಕ ಪಾತ್ರ. ನಾಯ್ಡುಗಳು 'ಅಂಬರೀಶ' ನಾದರೆ, ಮುತ್ತುರಾಜು 'ರಮಾಕಾಂತ'. ಇಬ್ಬರದೂ ಸೊಗಸಾದ ಜೋಡಿ. ನಾಯ್ಡು ಅವರದು ಅನುಭವದಿಂದ ಪರಿಪಕ್ವವಾದ ಅಭಿನಯ. ಮುತ್ತುರಾಜುವಿನದು ಶ್ರದ್ಧೆ - ಉತ್ಸಾಹ- ವಿನಯಗಳ ಪರಿಪಾಕದ ಅಭಿನಯ. ಇಬ್ಬರೂ ಅಭಿಜಾತ ಕಲಾವಿದರು. ಅಪ್ರತಿಮ ಪ್ರತಿಭಾಶಾಲಿಗಳು. ಒಳ್ಳೆ ಶರೀರ- ಶಾರೀರಗಳು. ಇಬ್ಬರೂ ಇರುವ ನಾಟಕಗಳೆಂದರೆ ಜನಜಾತ್ರೆ. ಚಪ್ಪಾಳೆಗಳ ಸುರಿಮಳೆ, ಹಿಗ್ಗಿನ ಹೊಳೆ.

ಹುಬ್ಬಳ್ಳಿಯಲ್ಲೊಮ್ಮೆ ನಮ್ಮ ಕ್ಯಾಂಪ್ ನಡೆದಿತ್ತು. ಮುತ್ತುರಾಜನಿಗೆ ಮದ್ರಾಸಿನಿಂದ ಒಂದು ತುರ್ತು ಸಂದೇಶ ಬಂದಿತು: 'ಬೇಡರ ಕಣ್ಣಪ್ಪ' ಚಿತ್ರದ ನಾಯಕ ಪಾತ್ರದ ಮಾಲೆ ಅವರ ಕೊರಳಿಗೇ ಬಿದ್ದಿತ್ತು! ಮುತ್ತುರಾಜನಿಗೆ ಮಾತ್ರ ಧರ್ಮ ಸಂಕಟ. ಈ ಅಪೂರ್ವ ಅವಕಾಶ, ಅರಸಿ ಬಂದ ಅದೃಷ್ಟವನ್ನು ಒಲ್ಲೆ ಎನ್ನಲಾರ. ತನ್ನ ಅಭಿವೃದ್ಧಿ, ಅಭ್ಯುದಯಕ್ಕೆ



ಕಾರಣವಾದ ಅಚ್ಚು ಮೆಚ್ಚಿನ ಕಂಪನಿ, ಯಜಮಾನರನ್ನು ಬಿಟ್ಟು ಹೋಗಲಾರ, ಹೋಗದೆ ಇರಲಾರ. ಹಾಗೆ ನೋಡಿದರೆ ಚಲನಚಿತ್ರ ಸೇರುವುದು ಅವರ ಬಹುದಿನದ ಕನಸು, ಮನದಾಸೆ. ಅವರ ತಂದೆ ಪುಟ್ಟಸ್ವಾಮಯ್ಯನವರ ಹಂಬಲವೂ ಅದೇ. ಮಗ ರಜತ ಪರದೆಯ ಮೇಲೆ 'ರಾಜಕುಮಾರ' ನಂತೆಯೇ ಮೆರೆಯಬೇಕೆಂಬುದು ಅವರ ಬಯಕೆ. ಅಪ್ಪನ ಆಸೆ ಪೂರೈಸಬೇಕೆಂಬುದು ಮಗನ ಹೆಬ್ಬಯಕೆ. ತಂದೆಯ ಪುಣ್ಯ, ಮಗನ ಭಾಗ್ಯ! ಆತ ಕನ್ನಡ ಚಿತ್ರರಂಗದಲ್ಲಿ ಎಲ್ಲರನ್ನೂ ಮೀರಿಸಿ, ಮೇಲೇರಿ ಮೇರು ನಟನಾಗಿ ಇಂದಿಗೂ, ಎಂದಿಗೂ ಮೆರೆದಿದ್ದಾರೆ. ಬಿರುದು, ಬಾವಲಿಗಳ ಸುರಿಮಳೆಯೇ ಆಗಿದೆ. ಪದ್ಮಭೂಷಣರಾಗಿಯೂ, ಕರ್ನಾಟಕ ರತ್ನರಾಗಿಯೂ ಆತ ಮಿರುಗಿದ್ದಾರೆ. ಎಲ್ಲಕ್ಕಿಂತ ಮೀರಿ ಜನಪ್ರೀತಿಯ ಮಹಾಪೂರದ ನಿರಂತರ ಧಾರೆಯೇ ಅವರ ಮೇಲೆ ಸುರಿದಿದೆ. ಕನ್ನಡಿಗರ ಹೃದಯ ಸಿಂಹಾಸನದಲ್ಲಿ ಸದಾ ಆಸೀನನಾಗಿ ವಿರಾಜಮಾನನಾದ ರಾಜ ಆತ. ನಾಯ್ಡುಗಳಿಗೆ ಮುತ್ತುರಾಜನ ಪ್ರತಿಭೆಯ ಪೂರ್ಣ ಪರಿಚಯವಿತ್ತು. ಆತ ಮುಂದೆ ಏನೇನಾಗಬಲ್ಲ, ಎಷ್ಟು ಎತ್ತರಕ್ಕೇರಬಲ್ಲ ಎಂಬ ಮುನ್ನೋಟವಿತ್ತು. ಬೆಳ್ಳಿ ತೆರೆಯಲ್ಲಿ ಅವನಿಗೆ ಭವ್ಯಭವಿಷ್ಯ ಕಾದಿದೆ ಎಂಬ ನಂಬಿಕೆಯೂ ಇತ್ತು. ಹೀಗಾಗಿ ಅಂಥ ಅಪ್ರತಿಮ ಕಲಾವಿದ ಸಿನಿಮಾ ಸೇರಲು - ಅರ್ಥಾತ್ ಕಂಪನಿ ಬಿಡಲು ಅನುಮತಿ, ಆಶೀರ್ವಾದ ಕೋರಿದಾಗ ಅವರು ಸುರಿಸಿದ್ದು: ಅಗಲಿಕೆಯ ಅಶ್ರುವಿಗಿಂತ ಅಧಿಕವಾಗಿ, ಆನಂದಬಾಷ್ಪವನ್ನೇ. ಸೋದರ ವರದಣ್ಣ, ಸೋದರಿ ಶಾರದಾರೊಂದಿಗೆ ಹುಬ್ಬಳ್ಳಿಯಿಂದ ಹೊರಟ ಹದಿಹರೆಯದ ಮುತ್ತುರಾಜ, ರಾಜ್‌ಕುಮಾರ್ ಆಗಿ ಬೆಳ್ಳಿ ತೆರೆಯ ಭಾಗ್ಯದ ಬಾಗಿಲನ್ನು ಪ್ರವೇಶಿಸಿ, ಕನ್ನಡ ಚಿತ್ರರಂಗಕ್ಕೆ ಭವ್ಯ ಇತಿಹಾಸವನ್ನೇ ಬರೆದರು. ಮುತ್ತುರಾಜರ ಪಾತ್ರಗಳನ್ನು ಕಂಪನಿಯಲ್ಲಿ ಮುಂದೆ ಮಹಾಲಿಂಗ ಭಾಗವತರ್ ಎಂಬುವರು ನಿರ್ವಹಿಸತೊಡಗಿದರು. ಆದರೂ ಮುತ್ತುರಾಜು ಕಂಪನಿಯಿಂದ ಕಾಲ್ತೆಗೆದ ಗಳಿಗೆಯ ಫಲವೋ ಏನೋ? ಕ್ಯಾಂಪಿನ ಕಲೆಕ್ಷನ್ ಕ್ರಮೇಣ ಕುಗ್ಗತೊಡಗಿ ಕೊನೆ ಕೊನೆಗೆ ಕುಸಿದೇ ಬಿಟ್ಟಿತು.

ಹೀಗೆ ಕಂಪನಿ ಕಷ್ಟದಲ್ಲಿದ್ದಾಗ ಒಂದು ದಿನ ಅಂಚೆ ಮೂಲಕ ನನಗೊಂದು ಕಾಗದ ಬಂತು. ಅರಸೀಕೆರೆಯ ಕಲಾಭಿಮಾನಿ, ಕಲಾಪೋಷಕ ನರಸಿಂಹ ಶೆಟ್ಟರು ಬರೆದಿದ್ದರು. ಅವರು ದಿ. ಹಿರಣ್ಣಯ್ಯನವರ ಆಪ್ತ ಸ್ನೇಹಿತರು. ಗೆಳೆಯನ ಅಕಾಲಿಕ ಮರಣ, ಆ ಕಾರಣದಿಂದ ಕಂಪನಿ ಕಣ್ಮುಚ್ಚಿದ್ದರಿಂದ ತುಂಬಾ ಕಳವಳಗೊಂಡಿದ್ದವರು. ಏನಾದರೂ ಮಾಡಿ ಅದಕ್ಕೆ ಮರುಹುಟ್ಟು ಕೊಟ್ಟು, ಮುಂಚಿನ ಉಚ್ಛ್ರಾಯ ಸ್ಥಿತಿಗೆ ತರುವ ಛಲ, ಹಂಬಲ ಅವರದು. ಖ್ಯಾತ ಸಾಹಿತಿ, ಕಾದಂಬರಿ ಸಾರ್ವಭೌಮ ಅ. ನ. ಕೃ. ಅವರಿಂದ ಸ್ಫೂರ್ತಿ, ಸಲಹೆ- ಸೂಚನೆ, ಸಹಕಾರಗಳನ್ನು ಪಡೆದಿದ್ದರು. ಹಿರಣ್ಣಯ್ಯನವರ ಮಗ ನರಸಿಂಹಮೂರ್ತಿ ವಿದ್ಯಾಭ್ಯಾಸವನ್ನು ಅರ್ಧದಲ್ಲೇ ನಿಲ್ಲಿಸಬೇಕಾಗಿ ಬಂದು ಹತಾಶನಾಗಿ ಅಲೆದಾಡುತ್ತಿದ್ದ. ಅವನನ್ನೇ ಹಿಡಿದು ಕಂಪನಿಯ ಜವಾಬ್ದಾರಿ ವಹಿಸಿಕೊಟ್ಟು, ಅವರಪ್ಪ

ಅಭಿನಯಿಸುವ ಅಭಿಲಾಷೆ ಶೆಟ್ಟರದು. ಪೂರ್ವ ಸಿದ್ಧತೆಯ ಆಡಿಸುತ್ತಿದ್ದ ನಾಟಕಗಳನ್ನೇ ಆಡಿಸುವ ಅಭಿಲಾಷೆ ಶೆಟ್ಟರದು. ಪೂರ್ವ ಸಿದ್ಧತೆಯ ನಡೆದು, ಮೊದಲ ನಾಟಕದ ದಿನವೂ ಗೊತ್ತಾಗಿತ್ತು. ನುರಿತ ನಾಯಕಿಗಾಗಿ ಹುಡುಕಾ ನಡೆದಿತ್ತು. ಹೀಗಾಗಿ ನನಗೆ ಕರೆ. ನನ್ನ ಯಜಮಾನರಿಗೂ ಮದ್ರಾಸಿಗೆ ಕಾಗ ಬರೆದಿರುವುದಾಗಿಯೂ, ಖಂಡಿತಾ ಬರಬೇಕೆಂದೂ ಆ ಕಾಗದದ ಒಕ್ಕಣೆ. ಮುಂದಿನ ಎರ ದಿನಗಳಲ್ಲಿ ಈ ಕರೆಗೆ ಒಪ್ಪಿಗೆ ನೀಡಬೇಕೆಂದು ನನ್ನವರು ಸೂಚಿಸಿದ ಕಾಗದವೂ ನನ ಬಂದು ತಲುಪಿತು.

ನನಗೋ? ಸುಬ್ಬಯ್ಯನಾಯ್ಡು ಅವರ ಕಂಪನಿ ಬಿಡಲು ಸುತರಾಂ ಮನಸ್ಸೊಪ್ಪದು ಅವರ ವಿಶ್ವಾಸ, ವಾತ್ಸಲ್ಯ ಅಷ್ಟು ಗಾಢವಾದುದು. ಆದರೆ ನನ್ನವರ ಮತ್ತು ಹಿತೈಷಿಗ ಮಾತಿಗೆ ಒಪ್ಪಲೇಬೇಕಲ್ಲ? ತುಂಬಾ ಅಳುಕಿನಿಂದಲೇ ನಾಯ್ಡು ಅವರೊಂದಿಗೆ ಈ ವಿಷ ತಿಳಿಸಿದೆ. ಕ್ಯಾಂಪ್ ಮುಗಿದೊಡನೆ ನನ್ನನ್ನು ಬಿಟ್ಟುಕೊಡಲು ವಿನಂತಿಸಿದೆ. "ಯಾಕಮ್ಮ ಹೀಗೆ ಮಾಡಿದೆ? ಸಂಬಳ ಹೆಚ್ಚು ಬೇಕೆಂದಿದ್ದರೆ ನಾನೇ ಕೊಡುತ್ತಿದ್ದೆನಲ್ಲಾ?" ಎಂದರು "ಇಲ್ಲ ಯಜಮಾನರೇ, ಇದು ಹಾಗಲ್ಲ. ನನ್ನವರು ಈ ವಿಷಯದಲ್ಲಿ ಮಾತು ಕೊಟ್ಟು ಬಿಟ್ಟಿದ್ದಾರೆ. ಅದನ್ನು ಉಳಿಸಬೇಕಲ್ಲ? ಅವರೂ ಬಂದು ಅಲ್ಲೇ ಸೇರುತ್ತಾರೆ. ಏನ ಮಾಡುವುದು?" ಎಂದೆ. "ಹೋಗಲಿ ಬಿಡಮ್ಮ. ಕೊಟ್ಟ ಮಾತು ಉಳಿಸಿಕೊಳ್ಳಬೇಕಾದದ್ದು ಮನುಷ್ಯನ ಮೂಲ ಧರ್ಮ. ಒಟ್ಟಿನಲ್ಲಿ ನಿನಗೆ ಒಳ್ಳೆಯದಾದರೆ ನನಗೂ ಸಂತೋಷ ಸಮಾಧಾನ. ದೇವರು ಒಳ್ಳೇದು ಮಾಡಲಿ, ಎಲ್ಲಿದ್ದರೂ ಚೆನ್ನಾಗಿರು" ಎಂದರು. ಅವರ ಕಣ್ಣಲ್ಲಿ ನೀರು ಬಂತು. ಆ ವಜ್ರಕಾಯದಲ್ಲಿ ಎಂಥಾ ಮೃದು ಹೃದಯ ಅಡಗಿದೆ ಎಂಬುದ ಸಾಕ್ಷಾತ್ ಅನುಭವ ಅಂದು ನನಗಾಯಿತು. ಆ ತಿಂಗಳ ಸಂಬಳದ ಮುಂಗಡ ಎಂದು ಎಪ್ಪತ್ತೈದು ರೂಪಾಯಿ ತೆಗೆದುಕೊಂಡಿದ್ದೆ. ಊರಿಗೆ ಹೋದ ಮೇಲೆ ಮರಳಿಸುತ್ತೇನೆಂದ "ಖಂಡಿತಾ ಕೂಡದು, ಕಳಿಸಿದರೂ ತೆಗೆದುಕೊಳ್ಳೋದಿಲ್ಲ" ಎಂದು ಖಂಡತುಂಡವಾ ತಿಳಿಸಿದರು. ಬಹಳ ಸಂಕಟದಿಂದ ಕಂಪನಿಯನ್ನೂ, ಒಡೆಯರನ್ನೂ ಸಂಗಡಿಗರನ್ನೂ ಬಿಟ್ಟು ಹೊರನಡೆದೆ.

## ಪಾಪಿ ಸಮುದ್ರ ಹೊಕ್ಕರೂ ಮೊಣಕಾಲೆತ್ತರವೇ ನೀರು!

ಬೆಂಗಳೂರಿಗೆ ೧೯೫೭ರ ಸುಮಾರಿಗೆ ಬಂದು ನರಸಿಂಹಮೂರ್ತಿಯ ಅರ್ಥಾತ್ 'ಮಾಸ್ಟರ್ ಹಿರಣ್ಣಯ್ಯ' ನವರ ಕಂಪನಿಗೆ ಸೇರಿದೆ. ನನ್ನವರೂ ಬಂದರು. ಮತ್ತೆ ನಾಟಕ ಪ್ರದರ್ಶನಗಳು ಪ್ರಾರಂಭ. ನಾನೂ ನಾಯಕಿಯಾಗಿ ಬಣ್ಣ ಹಚ್ಚತೊಡಗಿದೆ. ಕೆಲವಾರು ದಿನ ಎಲ್ಲವೂ ಚೆನ್ನಾಗಿಯೇ ನಡೆಯಿತು. ಅದೇನು ಕಾರಣವೋ? ಮತ್ತೆ ಕಲೆಕ್ಷನ್ ಕುಂಟತೊಡಗಿತು. ದಿನದಿನದ ಪ್ರದರ್ಶನಗಳು ನಿಂತವು. ವಾರಕ್ಕೆರಡು - ಒಂದು, ಎರಡು ವಾರಕ್ಕೊಮ್ಮೆ ಹೀಗೆ ವಿರಳವಾಗತೊಡಗಿದವು. ಮತ್ತೆ ಕಲಾವಿಲಾಸಿ ಸಂಸ್ಥೆಗಳ ಕರೆಗಾಗಿ ಹಾತೊರೆದು, ಊಟಕ್ಕೆ ದಾರಿ ಮಾಡಿಕೊಂಡೆ. ಹಾಗೂ ಹೀಗೂ ಕಾಲ ದೂಡಿದೆ.

ಒಂದೆರಡು ತಿಂಗಳಲ್ಲಿ ಮತ್ತೊಮ್ಮೆ ಮಾ.ಹಿರಣ್ಣಯ್ಯ ತಮ್ಮ ಅದೃಷ್ಟ ಪರೀಕ್ಷೆಗೆ ಸಿದ್ಧರಾದರು. ತಂದೆಯ ಕಂಪನಿಯಲ್ಲಿದ್ದ ಎಲ್ಲ ಹಳೆಯ ಕಲಾವಿದರನ್ನೂ ಒಗ್ಗೂಡಿಸಿದರು. ಮಳವಳ್ಳಿಯಲ್ಲಿ ಮೊಕ್ಕಾಂ ಹೂಡಿದರು. ನಮಗೆಲ್ಲ ಅಲ್ಲಿನ ಪ್ರವಾಸಿ ಮಂದಿರದಲ್ಲಿ ವಾಸ. ಹೊಸ ಉತ್ಸಾಹದಿಂದ ಅಭ್ಯಾಸ ಆರಂಭವಾಯಿತು. ಹಲವೊಂದು ಬದಲಾವಣೆ, ಸುಧಾರಣೆಗಳನ್ನೂ ಅಳವಡಿಸಿಕೊಂಡೆವು. ಪ್ರದರ್ಶನಗಳ ಪ್ರಾರಂಭಕ್ಕೆ ಎಲ್ಲವೂ ಸಜ್ಜಾಗಿತ್ತು. ಪ್ರಥಮ ಪ್ರಯೋಗಕ್ಕೆ ಇನ್ನು ಎರಡು ದಿನವಿರಬೇಕು. ಇದ್ದಕ್ಕಿದ್ದ ಹಾಗೆ ಮಳವಳ್ಳಿಯಲ್ಲಿ ಮಳೆ ಬೀಳಲಾರಂಭಿಸಿತು. ದಿನದಿನವೂ ಮಳೆ. ದಿನದಿನಕ್ಕೂ ಹೆಚ್ಚು- ಹೆಚ್ಚು ಮಳೆ, ಹುಚ್ಚುಮಳೆ. ಅಲ್ಲಿನ ಜನ ಎಂದೂ ಕಾಣದಂಥ, ಕೇಳದಂಥ ಮಳೆ. 'ರಾಮೇಶ್ವರಕ್ಕೆ ಹೋದರೂ ಶನೀಶ್ವರ ಬಿಡ' ಎಂಬಂತಾಯಿತು ನಮ್ಮ ಗತಿ. ಒಂದು ನಾಟಕವೂ ಜರುಗಲಿಲ್ಲ. ರಂಗದ ಪರದೆ ಮೇಲೇರಲೇ ಇಲ್ಲ. 'ಮೊದಲೇ ಮಳೆ, ಮೇಲೆ ಕೊಳೆ' ಎನ್ನುವಂತೆ ನಮ್ಮ ಸ್ಥಿತಿ. ಬೆಳಗಾದರೆ ಇವತ್ತು ಊಟವೋ, ಉಪವಾಸವೋ? ಎಂಬ ಚಿಂತೆ.

ದೇವರೇ ದಿಕ್ಕು ಎಂದು ಭಕ್ತಿಯಿಂದ ಮೊರೆ ಹೊಕ್ಕೆವು. ಅವನು ನಿಜಕ್ಕೂ ದೊಡ್ಡವನು. ನಂಬಿದವರ ಕೈ ಬಿಡಲಿಲ್ಲ. ಯಾರ್‍ಯಾರಿಗೆ ಯಾರ - ಯಾರ ಮೂಲಕ ನೆರವಾಗಬೇಕೋ ಅವನಿಗೇ ಗೊತ್ತು. ಹೊತ್ತು ಹೊತ್ತಿನ ತುತ್ತಿಗೂ ಕಾದು ಕಂಗಾಲಾಗಿದ್ದ ಕಲಾ ಬಳಗಕ್ಕೆ

ಸಹಾಯ ಹಸ್ತ ಚಾಚಿದ. ಕಲಾಪೋಷಣೆಗೆ, ಕಲಾವಿದರ ನೆರವಿಗೆ ಏನನ್ನೂ ಮಾಡಲು ಸಿದ್ಧರಿರುವ ಉದಾರ ಹೃದಯಿಗಳು ಅಲ್ಲಲ್ಲೇ ಇರುತ್ತಾರೆ. ಮಳವಳ್ಳಿಯ ಸಾರಾಯಿ ಗುತ್ತಿಗೆದಾರ ಸಣ್ಣಪ್ಪನವರು ಅಂಥ ಆಪದ್ಬಾಂಧವರಾಗಿ ನಮಗೆ ಒದಗಿಬಂದರು. ಕಂಪನಿ ಮನೆಗೆ ಅಕ್ಕಿ - ಬೇಳೆ, ಉಳಿದ ದಿನಸಿಗಳನ್ನು ವಾರಗಟ್ಟಲೆ ಉಚಿತವಾಗಿ ಸರಬರಾಜು ಮಾಡಿದರು. ಸಾಲದ್ದಕ್ಕೆ ತಮ್ಮ ಹೆಸರನ್ನು ಮಾತ್ರ ಯಾರಿಗೂ ಹೇಳಕೂಡದೆಂದು ಕೋರಿದರು. ಅಪಾರ ಸಹಾಯ ಮಾಡಿಯೂ, ಹೆಸರಿಗೂ ಆಸೆ ಪಡದ ಸಹೃದಯರು ಯಾವ ಕಾಲದಲ್ಲಿ ತಾನೇ ಸುಲಭವಾಗಿ ಸಿಕ್ಕಾರು?

ಮಳವಳ್ಳಿಯ ಅನುಭವದಿಂದ ಬಳಲಿ ಬೆಂಡಾಗಿದ್ದೆವು. ನಾವು ಮುಂದೆ ಸೋಸಲೆಗೆ ಹೋಗಿ ಬೀಡು ಬಿಟ್ಟೆವು. ಒಂದಷ್ಟು ನಾಟಕಗಳೇನೋ ನಡೆದವು. ಕಾಂಚಾಣವೇ ಸರಿಯಾಗಿ ಕಾಣಲಿಲ್ಲ. ನಮ್ಮ ಕಾರ್ಪಣ್ಯ ಕಡಿಮೆಯಾಗಲಿಲ್ಲ. ದಿನ ದೂಡುವುದೇ ತುಂಬ ದುಸ್ಸಾಧ್ಯವಾಗಿತ್ತು. ಇಂಥಾ ಪರಿಸ್ಥಿತಿಯಲ್ಲಿ ಸೋಸಲೆಗೆ ಬಂದಿಳಿಯಿತು, ಮಹಾತ್ಮಾ ಪಿಕ್ಚರ್ಸ್ ತಂಡ. "ಪ್ರಭುಲಿಂಗಲೀಲೆ" ಚಿತ್ರೀಕರಣಕ್ಕಾಗಿ. ನಿರ್ಮಾಪಕ- ನಿರ್ದೇಶಕ ಶಂಕರ್‌ಸಿಂಗ್ ಅವರಿಂದ ರಾಣಿಯ ಪಾತ್ರ ವಹಿಸಲು ನನಗೆ ಕರೆ ಬಂತು. ತುತ್ತಿನ ಚೀಲ ತುಂಬುವ ಚಿಂತೆಯೇ ಕಿತ್ತು ತಿನ್ನುತ್ತಿರುವಾಗ, ಚಿತ್ರದಲ್ಲೊಂದು ಪಾತ್ರ ನನ್ನ ಪಾಲಿಗೆ ಬಂತು: 'ಬಡವನ ಮನೆಗೆ ಭಾಗ್ಯಲಕ್ಷ್ಮಿ ಬಂದ ಹಾಗೆ!'. ಅಲ್ಲಿ ಚಿತ್ರೀಕರಣ ಮುಗಿದ ಮೇಲೆ ಬೆಂಗಳೂರಿಗೆ ವಾಪಸ್ಸು ಬಂದೆ. ಮೈಸೂರಿನಿಂದ 'ಸ್ತ್ರೀರತ್ನ' ಚಿತ್ರದಲ್ಲಿ ತಾಯಿ ಪಾತ್ರ ವಹಿಸಲು ಆಹ್ವಾನ ಬಂತು. 'ಸ್ತ್ರೀ ರತ್ನ' ಮೂಲಕ ನಟರತ್ನರೊಬ್ಬರ ಪರಿಚಯ ಕನ್ನಡ ಚಿತ್ರರಂಗಕ್ಕೆ ಆಯಿತು. ಅವರೇ ಕೆ.ಎಸ್.ಅಶ್ವತ್ಥ್.

ಮದ್ರಾಸಿನಲ್ಲಿ ಪಿ.ವಿ.ರಾಜು 'ಕಚದೇವಯಾನಿ' ಕನ್ನಡ ಚಿತ್ರದ ಕೆಲಸ ಶುರು ಮಾಡಿದ್ದರು. ಅದರಲ್ಲಿ ಕೆಲಸ ಮಾಡಿ ಎಂದು ಮೂರ್ತಿಗೂ ನನ್ನವರಿಗೂ ಒತ್ತಾಯದ ತುರ್ತು ಕರೆ ಬಂತು. ತೆರೆಯ ಸೆಳೆತವೂ ಜೋರಾಗಿಯೇ ಇತ್ತು. ಸರಿ, ಇಬ್ಬರೂ ಮದ್ರಾಸಿಗೆ ಹಾರಿದರು. ಬಹಳ ಆಸೆ- ಆಕಾಂಕ್ಷೆಗಳಿಂದ ಆರಂಭಿಸಿದ್ದ ಕಂಪನಿಯ ಬಾಗಿಲು ಮತ್ತೆ ಮುಚ್ಚಿತು. ಕಲಾವಿದರು ಒಬ್ಬೊಬ್ಬರೊಂದೊಂದು ಕಡೆ ಚದುರಿದರು. ಉದರಪೋಷಣೆಗಾಗಿ ಬೇರೆ ಕಂಪನಿ, ಬೇರೆ ಕೆಲಸ, ಬೇರೆ ಊರು ಅರಸಿ ಹೊರಟರು. ನಾನು ಬೆಂಗಳೂರಲ್ಲೇ ಉಳಿದೆ.

ದೊಡ್ಡ ಹಿರಣ್ಣಯ್ಯನವರು ಮಡಿಕೇರಿ ಕ್ಯಾಂಪಿನಲ್ಲಿ ಹಠಾತ್ ನಿಧನ ಹೊಂದಿದರಲ್ಲ? ಆಗಲೇ ಹಿರಣ್ಣಯ್ಯ ಮಿತ್ರ ಮಂಡಲಿಯೂ ನಿಂತು ಹೋಯಿತು. ಬಳ್ಳಾರಿ ಲಲಿತಮ್ಮ ಆ ಕಂಪನಿಯ ಪ್ರಧಾನ ನಾಯಕ ನಟಿಯಾಗಿದ್ದವರು. ಆಕೆ ಮಂಡಲಿಯ ಎಲ್ಲಾ ಸಾಮಾನು ಸರಂಜಾಮು, ಸರಕನ್ನು ತಮ್ಮ ಅಣ್ಣ ವೆಂಕಟಪ್ಪನವರ ಸಹಾಯ ಪಡೆದು ತಮ್ಮ ಊರು ಬಳ್ಳಾರಿಗೆ ಸಾಗಿಸಿದ್ದರು. ಇವೆಲ್ಲ ಮೂಲೆ ಸೇರಿ, ಧೂಳುತುಂಬಿ, ತುಕ್ಕು ಹಿಡಿಯುತ್ತಿತ್ತು.



ಮಂಡಳಿಯನ್ನು ಹೇಗಾದರೂ ಮಾಡಿ ಪುನರುಜ್ಜೀವನಗೊಳಿಸಬೇಕು ಎಂಬುದು ಅವರ ಹಂಬಲ, ಸಂಕಲ್ಪ. ಮದ್ರಾಸಿನಲ್ಲಿದ್ದ ಮೂರ್ತಿ ಹಾಗೂ ಪಾರ್ಥಸಾರಥಿಯವರನ್ನು ಸಂಪರ್ಕಿಸಿದರು. ಅವರು ಬೆಂಗಳೂರಿಗೆ ಬಂದಿಳಿದರು. ಬಳ್ಳಾರಿ ಲಲಿತಮ್ಮನವರ ಪ್ರೇರಣೆಯಂತೆ ಮಂಡಲಿಯ ಹಿರಿಯ ಕಲಾವಿದರನ್ನೆಲ್ಲಾ ಹುಡುಕಿ, ಹುರುಪು ತುಂಬಿ ಕಲೆ ಹಾಕಿದರು. ಅವರಲ್ಲಿ ಪ್ರಖ್ಯಾತ ರಂಗ ನಟ ಬಿ.ಎನ್.ಚಿನ್ನಪ್ಪ ಹಾಗೂ ಚಿತ್ರರಂಗದಲ್ಲಿ ಮುಂದೆ ಪ್ರಸಿದ್ಧಿ ಪಡೆದ ಪ್ರತಿಭಾಶಾಲಿ ನಟ ಕೆ.ಎಸ್.ಅಶ್ವಥ್ ಅವರೂ ಇದ್ದರು. ಬಳ್ಳಾರಿಯ ಖ್ಯಾತ ವೈದ್ಯ ಡಾ.ಮುನಿಸ್ವಾಮಪ್ಪನವರ ಸಹಾಯಾರ್ಥ ಪ್ರದರ್ಶನದ ಮೂಲಕ ನಾಟಕ ಪ್ರದರ್ಶನಗಳಿಗೆ ಶ್ರೀಕಾರ ಹಾಕಲಾಯಿತು. ದಿ. ಹಿರಣ್ಣಯ್ಯನವರ ಮೆಚ್ಚಿನ 'ದೇವದಾಸಿ' ಯದೇ ಪ್ರದರ್ಶನ. ಮೂರ್ತಿಯದೇ ನಾಜೂಕಯ್ಯನ ಪಾತ್ರ. ನಿರೀಕ್ಷೆಗೂ ಮೀರಿ ಚೆನ್ನಾಗಿ ಬಂತು. ಜನ ತುಂಬಾ ಉತ್ತೇಜನ ನೀಡಿದರು. ಹೀಗಾಗಿ ಎಲ್ಲರಿಗೂ ಕಂಪನಿಯನ್ನು ಸುವ್ಯವಸ್ಥಿತವಾಗಿ ಪುನರಾರಂಭಿಸುವ ಹುರುಪು, ಹುಮ್ಮಸ್ಸು. ಮೂರ್ತಿ ಮತ್ತು ಪಾರ್ಥಸಾರಥಿ ಬೇಕಾದ ಏರ್ಪಾಟು, ಒಳ್ಳೆಯ ದಿನ ಗೊತ್ತು ಮಾಡಲು ಮುಂದಾದರು. ೧೯೫೮ನೇ ಇಸವಿ. ಮಾ|| ಹಿರಣ್ಣಯ್ಯ ಮಿತ್ರ ಮಂಡಲಿಯ ಆರಂಭಕ್ಕೆ ಶುಭದಿನವೂ ಗೊತ್ತಾಯಿತು. ಬಳ್ಳಾರಿಯಲ್ಲಿ ಈ ಕಾರ್ಯಕ್ರಮ.

ವಿಧಿ ವಿಲಾಸ ಹೇಗಿರುತ್ತೆ ನೋಡಿ! ಅದುವರೆಗೂ ಕೆಲಸವಿಲ್ಲದೆ ಕಾದು ಖಾಲಿ ಕೂತಿದ್ದ ನಾನು, ಭದ್ರಾವತಿಯ 'ಅಂಬಾ ಸೆಲೆಕ್ಟ್ ಆರ್ಟಿಸ್ಟ್ಸ್' ಕಲಾವಿಲಾಸಿ ಸಂಸ್ಥೆಯ ನಾಟಕಕ್ಕೆ ಅದೇ ದಿನ ಬರುವುದಾಗಿ ಬಹು ಹಿಂದೆಯೇ ಒಪ್ಪಿಬಿಟ್ಟಿದ್ದೆ. ಅಂದು ನಾನು, ನನ್ನ ತಂಗಿ ಮಂಜುಳ ಅಲ್ಲಿಗೆ ಹೋಗಲು ರೈಲು ಹತ್ತಬೇಕು. ಮತ್ತೊಮ್ಮೆ ಧರ್ಮ ಸಂಕಟ. ಮಾತು ಉಳಿಸಿಕೊಳ್ಳುವುದು ನನ್ನ ಚಟ. ಹೀಗಾಗಿ ಬಳ್ಳಾರಿಗೆ ಹೊರಡುವ ಬದಲು ಭದ್ರಾವತಿಗೆ ಹೊರಟೆ. ಯಜಮಾನರ ಬಲವಂತಕ್ಕೂ ಮಣಿಯಲಿಲ್ಲ. ಬೇರೆಯವರ ಒತ್ತಾಯಕ್ಕೂ ಸೋಲಲಿಲ್ಲ. ಎಲ್ಲರಿಗೂ ಬೇಸರವಾಯಿತು. ನಿವೃತ್ತಿ ಬಯಸಿದ್ದ ನುರಿತ ನಟಿ ಲಲಿತಮ್ಮನೇ ಮತ್ತೆ ನಾಯಕಿಯಾಗಿ ರಂಗ ಹತ್ತಿದರು. ಬಣ್ಣ ಹಚ್ಚಲು ಒಪ್ಪಿದರು. ಮುಂದೆ ಅವರೇ ಖಾಯಂ ಆದರು. ಯಾವ ಕಾರಣಕ್ಕೆ ನನಗೆ ಗುಬ್ಬಿ ಕಂಪನಿ ಬಾಗಿಲು ಮುಚ್ಚಿತ್ತೋ, ಅದೇ ಕಾರಣಕ್ಕೆ ಮತ್ತೆ ಮಿತ್ರಮಂಡಲಿಯ ಬಾಗಿಲೂ ಬಂದಾಯಿತು- ಸದಾ ಕಾಲಕ್ಕೂ, ಎಂದೆಂದಿಗೂ! ನನ್ನವರು ಮಿತ್ರ ಮಂಡಲಿಗೆ ನಡೆದರು. ನಾನು ಭದ್ರಾವತಿಯಿಂದ ಮರಳಿ ಬಂದೆ, ಬೆಂಗಳೂರಿನಲ್ಲೇ ಉಳಿದೆ. ಇಬ್ಬರ ದಾರಿಯೂ ಬೇರೆ, ಬೇರೆಯಾಯಿತು. ಮತ್ತೆ ಸೇರುವ ಅವಕಾಶವೇ ಬರಲಿಲ್ಲ. ನಮ್ಮ ಸಂಬಂಧವೇನಿದ್ದರೂ ಕಾಗದ -ಪತ್ರಗಳಿಗೆ ಮಾತ್ರ ಸೀಮಿತಗೊಂಡಿತು.

'ಬೇಡರ ಕಣ್ಣಪ್ಪ' ರಾಜಕುಮಾರರ ಅದ್ಭುತ ಅಭಿನಯದಿಂದ ಪ್ರಚಂಡ ಜಯಭೇರಿ ಬಾರಿಸಿತ್ತು. ಆದರೂ ಅವರಿಗೆ ನಾಟಕದ ಮೇಲೆ ತೀರದ ಮೋಹ. ಹೀಗಾಗಿ ನಾಟಕ ಅವರನ್ನು ಮತ್ತೆ ಕೈ ಬೀಸಿ ಕರೆಯಿತು. ಮದ್ರಾಸಿನಲ್ಲಿ ಬೀಡು ಬಿಟ್ಟಿದ್ದ ಇತರ ಕಲಾವಿದರೊಡನೆ ಅವರು ಸೇರಿದರು. 'ಕನ್ನಡ ಚಲನಚಿತ್ರ ಕಲಾವಿದರ ಸಂಘ - ರಾಜ್‌ಕುಮಾರ್ ಪಾರ್ಟಿ' ಎಂಬ ತಂಡ ಕಟ್ಟಿದರು. ರಾಮಚಂದ್ರ ಶಾಸ್ತ್ರಿ, ಕೃಷ್ಣ ಶಾಸ್ತ್ರಿ, ಬಾಲಕೃಷ್ಣ, ನರಸಿಂಹರಾಜು, ಜಿ.ವಿ.ಅಯ್ಯರ್ ಮೊದಲಾದವರೇ ಸಂಗಡಿಗರು. ಕಾಂಟ್ರಾಕ್ಟ್ ಆಧಾರದ ಮೇಲೆ ಹಾಸನದಲ್ಲಿ ನಾಟಕದ ಕ್ಯಾಂಪ್ ಹೂಡಿದರು. 'ಎಚ್ಚಮ ನಾಯಕ' ಆಡಲು ತಯಾರಿ ನಡೆಯಿತು. ಅದಾಗಲೇ ಚಿತ್ರರಂಗಕ್ಕೂ ಕಾಲಿರಿಸಿದ್ದ ಆದವಾನಿ ಲಕ್ಷ್ಮಿ, ಜಯಶ್ರೀ, ರಮಾದೇವಿ ಇವರೂ ಜೊತೆಗೂಡಿದರು. ಅವರಾರಿಗೂ 'ಎಚ್ಚಮ ನಾಯಕ' ನಾಟಕದ ಪರಿಚಯವಿರಲಿಲ್ಲ. ಅದಕ್ಕಾಗಿ ನನಗೆ ಕರೆ ಬಂತು. ಒಪ್ಪಿ ಹೋದೆ, ನಟಿಸಿದೆ. ಮುಂದೆ 'ಸಾಹುಕಾರ ' ಹಾಗೂ ಮತ್ತಷ್ಟು ನಾಟಕಗಳಲ್ಲೂ, ತಾಯಿ - ತಂಗಿ - ಗೆಳತಿ ಪಾತ್ರಗಳನ್ನೂ ಮಾಡಿದೆ. ದಿನದ ಸಂಬಳ ಇಪ್ಪತ್ತೈದು ರೂಪಾಯಿ. ಕಂಪನಿಯಲ್ಲಿ ಮನೆಯ ವಾತಾವರಣ - ತುಂಬು ಸ್ನೇಹ, ಅನ್ಯೋನ್ಯತೆ. ಇದರಿಂದಾಗಿ ತೃಪ್ತಿ, ನೆಮ್ಮದಿ, ಸಂತೋಷದ ದಿನಗಳನ್ನು ಕಂಡೆ.

ನಾಟಕಗಳ ಸರಮಾಲೆ ಹೀಗೆ ಸಾಗಿದ್ದಾಗ ರಾಜ್ ಮತ್ತು ತಂಡದವರು ಮತ್ತೆ ಸಿನಿಮಾ ಕಡೆ ಹೊರಳಿದರು. ತಾವೇ ಸೇರಿ 'ರಣಧೀರ ಕಂಠೀರವ' ಚಿತ್ರದ ನಿರ್ಮಾಣಕ್ಕೆ ಕೈ ಹಾಕಿದರು. ನಿಜಕ್ಕೂ ಇದೊಂದು ಶ್ರೇಷ್ಠ ಕಲಾಕೃತಿಯಾಯಿತು. ಇದರಲ್ಲಿ ಪ್ರತಿಯೊಬ್ಬರ ಪ್ರತಿಭೆಯೂ ಪ್ರಜ್ವಲವಾಗಿ ಪ್ರಕಾಶಿಸಿತು. ಅದರಿಂದ ಒಬ್ಬೊಬ್ಬರಿಗೂ ಹಲವಾರು ಅವಕಾಶಗಳು ಹುಡುಕಿಕೊಂಡು ಬಂದವು. ಹೀಗಿರುವಾಗ ನಾಟಕಕ್ಕಾಗಿ ಬಣ್ಣ ಹಚ್ಚಲು ಯಾರಿಗೆ ತಾನೇ ಬಿಡುವು, ಒಲವು? ನಾಟಕ ನಿಂತಿತು. ನಾನು ಮತ್ತೆ ನಿರುದ್ಯೋಗಿ! ನನ್ನ ಜೀವನವೆಲ್ಲಾ ಹೀಗೆಯೇ. ಏರಿಳಿತಗಳ ದಾರಿ, ಅನಿರೀಕ್ಷಿತ ತಿರುವುಗಳು. ಆದರೂ ದಾರಿಯೊಂದು ಮುಚ್ಚಿತೆನ್ನುವಾಗ ಮತ್ತೊಂದು ನನಗಾಗಿ ತೆರೆದಿರುತ್ತಿತ್ತು. ಆ ದೈವ ನನಗೆ ಸದಾ ಬೆಂಬಲವಾಗಿ, ಬೆಂಗಾವಲಾಗಿ ಮುನ್ನಡೆಸುತ್ತಲೇ ಬಂದಿದೆ.

## ಹೊಸ ಪಾರ್ಟಿ - ಹೊಸ ಹುಟ್ಟು

ಮೈಸೂರಿನಲ್ಲಿದ್ದ ಅಂಬುಜಮ್ಮ ಎಂಬ ಕಲಾಪ್ರೇಮಿ ನನಗೆ ತುಂಬಾ ಪರಿಚಿತರು. ಅವರಿಗೆ ಮೂವರು ಹೆಣ್ಣು ಮಕ್ಕಳು, ಒಬ್ಬ ಮಗ. ಅವರೆಲ್ಲರೂ ಕಲಾವಿಲಾಸಿ ಸಂಸ್ಥೆಗಳಲ್ಲಿ ಪಾತ್ರ ವಹಿಸುತ್ತಿದ್ದರು. ಆ ವೇಳೆಗಾಗಲೇ ದೊಡ್ಡ ದೊಡ್ಡ ಕಂಪನಿಗಳೆಲ್ಲಾ ಮುಚ್ಚಿದ್ದವು. ರಂಗ ಚಟುವಟಿಕೆಗಳೆಲ್ಲಾ ಕುಂಠಿತವಾಗಿದ್ದವು. ನಾಟಕ ಪ್ರೇಮಿಯಾಗಿದ್ದ ಅಂಬುಜಮ್ಮನವರಿಗೆ ಏನಾದರೂ ಮಾಡಿ ನಾಟಕಗಳನ್ನು ಮತ್ತೆ ಆಡಿಸಬೇಕೆಂಬ ಹಂಬಲ. ಗುಬ್ಬಿ ಕಂಪನಿಯಲ್ಲಿದ್ದ ದೊರೆಸ್ವಾಮಿಯವರನ್ನು ಮೈಸೂರಿಗೆ ಕರೆಸಿಕೊಂಡರು. ಅವರನ್ನು ನಾಟಕಗಳ ನಿರ್ವಾಹಕರಾಗಿರಲು ಒಪ್ಪಿಸಿದರು. ಹೆಚ್.ಪಿ.ಸರೋಜಾ ಮತ್ತು ನನ್ನನ್ನು ಬರಲು ಹೇಳಿದರು. ಇನ್ನೂ ಹಲವು ಕಲಾವಿದರನ್ನು ಕಲೆ ಹಾಕಿದರು. ಎಲ್ಲರೊಡನೆ ಸಮಾಲೋಚಿಸಿ. 'ಶ್ರೀ ಕೃಷ್ಣಗಾರುಡಿ'ಯ ಸಹಾಯಾರ್ಥ ಪ್ರದರ್ಶವೊಂದನ್ನು ಏರ್ಪಡಿಸಿದರು.

ಅಂಬುಜಮ್ಮನವರದು ಆಧುನಿಕ ಆಲೋಚನಾ ದಾರಿ. ಹೊಸ ಹೊಸ ವಿಚಾರಗಳು ಅವರ ತಲೆ ತುಂಬಿದ್ದವು. ನಾಟಕಗಳು ಮಾಮೂಲಿನಂತಿರದೆ ನವೀನ ತಂತ್ರ - ಉಪಾಯ - ಪ್ರಯೋಗಗಳನ್ನು ಒಳಗೊಂಡಿರಬೇಕೆಂದು ಅವರ ಅಭಿಪ್ರಾಯ. ತಮ್ಮ ಮನೋಗತವನ್ನು ಅವರು ನಮ್ಮ ಮುಂದೆ ಬಿಚ್ಚಿಟ್ಟರು. ಅರ್ಥಾತ್ ನಮ್ಮ ಜೀವನಗತಿಗೇ ಹೊಸ ತಿರುವು ಕೊಟ್ಟರು. ಆ ಕಾಲಕ್ಕೆ ಹೆಣ್ಣು ಪಾತ್ರಗಳನ್ನೂ ಗಂಡಸರೇ ಮಾಡುತ್ತಿದ್ದರಲ್ಲಾ? ಅದಕ್ಕೆ ವ್ಯತಿರಿಕ್ತವಾಗಿ ಗಂಡು ಪಾತ್ರಗಳನ್ನು ಹೆಣ್ಣು ಮಕ್ಕಳು ಏಕೆ ಮಾಡಬಾರದು! ಇದು ಸಾಧ್ಯವಿಲ್ಲವೇ? ಎಂಬುದವರ ಯೋಚನೆ.

ಎಲ್ಲರೂ ಹೆದರಿ ಹಿಂಜರಿಯುತ್ತಲೇ ಅದಕ್ಕೆ ಸಮ್ಮತಿ ಸೂಚಿಸಿದರು. ಮಾತು ಮುಂದುವರಿಯುತ್ತ, ಹೆಚ್.ಪಿ.ಸರೋಜಾ ಕೃಷ್ಣನ ಪಾತ್ರವನ್ನೂ, ನಾನು ಭೀಮನ ಪಾತ್ರವನ್ನೂ ವಹಿಸಿ ನಾಟಕವಾಡಬೇಕೆಂಬ ಪ್ರಸ್ತಾಪ ಬಂದು ಬಿಟ್ಟಿತು. ನನಗೆ ದಿಗ್ಭ್ರಮೆಯೇ ಆಯಿತು. ಜಂಘಾಬಲವೇ ಉಡುಗಿತು. ನಾನು ಅದುವರೆಗೆ ಮಾಡಿದುದೆಲ್ಲಾ ತಾಯಿ-ತಂಗಿ - ರಾಜಕುಮಾರಿ- ರಾಣಿಯಂಥ ಸೌಮ್ಯ, ಸುಕೋಮಲ ಪಾತ್ರಗಳು. ಅಬ್ಬಬ್ಬಾ

'ಅಬ್ಬಾ ಆ ಹುಡುಗಿ'ಯ ಬಜಾರಿಯಂಥ ಪಾತ್ರಗಳು. ಹೀಗಿರುವಾಗ ಎಂದರೆ 'ಅಬ್ಬಾ ಆ ಹುಡುಗಿ'ಯ ಬಜಾರಿಯಂಥ ಪಾತ್ರಗಳು. ಹೀಗಿರುವಾಗ ಭೂಮಂಡಲವನ್ನೇ ನಡುಗಿಸಿದ ಗಂಡುಗಲಿ ಭೀಮನ ಪಾತ್ರವನ್ನು ನಾನು ಮಾಡುವುದಾದರೂ ಹೇಗೆ? ಗಂಡು ಪಾತ್ರ, ಅದೂ ಭೀಮನದು!? 'ಖಂಡಿತಾ ಸಾಧ್ಯವಿಲ್ಲ', ಎಂದು ಖಡಾಖಂಡಿತವಾಗಿ ನುಡಿದೆ. ಅಂಬುಜಮ್ಮ, ದೊರೆಸ್ವಾಮಿ ಬಡಪಟ್ಟಿಗೆ ಬಿಡಲಿಲ್ಲ. ಹಠ ಹಿಡಿದರು. "ನಿನ್ನ ಪ್ರತಿಭೆ - ಸಾಮರ್ಥ್ಯ ನಿನಗೇ ಗೊತ್ತಿಲ್ಲ. ನಮಗೆ ವಿಶ್ವಾಸವಿದೆ. ನಿಜವಾಗಿಯೂ ಭೀಮನ ಪಾತ್ರವನ್ನು ಚೆನ್ನಾಗಿ ಮಾಡಿಯೇ ಮಾಡುತ್ತೀಯ. ಹೆಸರು ಮಾಡಿಯೇ ಮಾಡುತ್ತೀ. ಹೆದರುವುದೇನೂ ಬೇಡ" ಎಂದು ಧೈರ್ಯ ಹೇಳಿದರು. ಪುಸಲಾವಣೆ ಮಾಡಿದರು. ಸಾಗರ ಹಾರಲು ಹಿಂಜರಿಯುತ್ತಿದ್ದ ಹನುಮಂತನನ್ನು ಹುರಿದುಂಬಿಸಿದಂತೆ ಹಾಗೂ, ಹೀಗೂ ಮಾಡಿ ನನ್ನನ್ನೊಪ್ಪಿಸಿದರು. ಪ್ರಾಕ್ಟೀಸು ಚೆನ್ನಾಗಿ ಮಾಡುವಂತೆ ಹೇಳಿ ನಾಟಕದ ಪುಸ್ತಕವನ್ನು ಕೊಟ್ಟು ಬೆಂಗಳೂರಿಗೆ ಕಳಿಸಿದರು.

ಮನೆಗೆ ಬಂದ ಮೇಲೆ ಮತ್ತೊಂದು ಅಧ್ಯಾಯ. ಅಮ್ಮ, ಮಕ್ಕಳು, ನೆಂಟರು ಎಲ್ಲರಿಂದ ಬೈಗಳು. 'ನಿನಗೇನು ಬುದ್ಧಿ - ಗಿದ್ಧಿ ಇದೆಯೋ, ಇಲ್ಲವೋ? ಹೆಣ್ಣು ಪಾತ್ರಮಾಡಿ ಹಾಗೂ ಹೀಗೂ ಹೆಸರು ಮಾಡಿ ಹೊಗಳಿಸಿಕೊಂಡಿದ್ದೀಯಾ. ಗಂಡು ಪಾತ್ರ ಮಾಡಿದರೆ ಹೊಳೆಯಲ್ಲಿ ಹುಣಸೇಹಣ್ಣು ತೊಳೆದ ಹಾಗೆ ಆಗುತ್ತೆ ಅಷ್ಟೇ. ಹೆಸರೂ ಹಾಳಾಗುತ್ತೆ. ಮುಂದೆ ಹೆಣ್ಣು ಪಾತ್ರಗಳಿಗೂ ಸೊನ್ನೆ ಬೀಳುತ್ತೆ. ನಿನ್ನ ಗಂಡು ಪಾತ್ರ ನೋಡಿ ಕಲ್ಲಿನ ಮಳೆ ಸುರಿಯದಿದ್ದರೆ ಅದೇ ನಿನ್ನ ಪುಣ್ಯ' ಎಂದೆಲ್ಲಾ ಹಳಿದರು, ಹೀಯಾಳಿಸಿದರು, ಹಾಸ್ಯ ಮಾಡಿದರು. ಗೆಳತಿಯರನ್ನು ಕೇಳಿದರೆ ಎಲ್ಲರೂ ನನ್ನ ಬಾಯಿ ಮುಚ್ಚಿಸುವವರೇ. ನನ್ನ ಉತ್ಸಾಹಕ್ಕೆ ತಣ್ಣೀರೆರೆಚುವವರೇ. ಎಲ್ಲರೊಡನೆಯೂ ಮಾತು ನಿಲ್ಲಿಸಿಬಿಟ್ಟೆನೇ ಹೊರತು, ಅವರ ಮಾತಿಗೆ ಕಿವಿಗೊಡಲಿಲ್ಲ- ಮನಗೊಡಲಿಲ್ಲ.

ನಾನೂ ಒಬ್ಬಳೇ ಕುಳಿತು ನಿಧಾನವಾಗಿ ಯೋಚನೆ ಮಾಡಿದೆ. ಜೊತೆಗೆ ಅಂಬುಜಮ್ಮನವರು ಹೇಳಿದ್ದೇ ನನ್ನ ಕಿವಿಯಲ್ಲಿ ಮೊರೆಯುತ್ತಿತ್ತು. "ನೋಡೇ ಬಿಡೋಣ, ಇದೊಂದು ಹೊಸ ವಿಚಾರ. ಕನ್ನಡ ರಂಗಭೂಮಿಯಲ್ಲೇ ನವೀನ ಪ್ರಯೋಗ. ಇದರಲ್ಲಿ ಯಶಸ್ವಿಯಾದರೆ ಹೊಸದೊಂದು ಕ್ರಾಂತಿಯನ್ನೇ ಮಾಡಿದಂತಾಗುತ್ತದೆ. ಹೊಸದಾಖಲೆ, ಚರಿತ್ರೆ ಬರೆದ ಹಾಗೆ ಆಗುತ್ತದೆ. ನನ್ನ ಹೆಸರು ಚಿರವಾಗಿ ಉಳಿಯುತ್ತದೆ. ಒಂದೊಮ್ಮೆ ನಾನು ಸೋತು ಹೋದರೆ ಏನೂ ನಷ್ಟವಿಲ್ಲ. ಹಲವು ಹತ್ತು ಪ್ರಯೋಗಗಳು ಮೂಲೆಗೆ ಬಿದ್ದಿವೆ, ಕೆಲವೊಂದು ಗೆದ್ದಿವೆ ಅದರ ಹಾಗೆ ಇದು. ಏನೇ ಆದರೂ ನಾನು ತಾನೇ ಏನು ಮಾಡಲು ಆಗುತ್ತದೆ - ಹೆದರುವುದೇಕೆ?" ಎಂಬ ವಿಚಾರವೂ ಬಂತು. ಮನಸ್ಸು ದೃಢ ಮಾಡಿದೆ. ಈ ಸವಾಲನ್ನು ಒಪ್ಪಿಕೊಳ್ಳಲೇಬೇಕು. ಸಾಧಿಸಲು ನನ್ನ ಶಕ್ತಿ- ಸಾಮರ್ಥ್ಯವನ್ನೆಲ್ಲಾ ಧಾರೆ ಎರೆಯಬೇಕು, ಒರೆಗೆ ಹಚ್ಚಬೇಕು ಎಂದು ಸಂಕಲ್ಪಿಸಿದೆ. ಶ್ರಮ- ಶ್ರದ್ಧೆಯಿಂದ ಅಭ್ಯಾಸ



ಪ್ರಾರಂಭ ಮಾಡಿದೆ. ಆದರೂ ನನ್ನ ಮನದ ಮೂಲೆಯಲ್ಲೆಲ್ಲೋ ಅಳುಕು- ಅಂಜಿಕೆ ಆಗಾಗ ಇಣುಕುತ್ತಲೇ ಇತ್ತು. ನನ್ನ ನಂಬಿಕೆ, ನಿರ್ಧಾರವನ್ನು ಅಣಕಿಸುತ್ತಿತ್ತು.

೧೯೫೯ರ ಒಂದು ಶುಭದಿನ. ಕನ್ನಡ ರಂಗಭೂಮಿಯ ಸುದೀರ್ಘ ಇತಿಹಾಸದಲ್ಲಿಯೇ ವಿಶೇಷ ದಿನ. ಅಂದು - ಮೊತ್ತ ಮೊದಲಿಗೆ ಪುರುಷ ಪಾತ್ರಗಳೂ ಸೇರಿದಂತೆ ಎಲ್ಲ ಪಾತ್ರಗಳನ್ನು ಮಹಿಳೆಯರೇ ವಹಿಸುವ ಹೊಚ್ಚ ಹೊಸ ಪ್ರಯೋಗದ ನಾಟಕ'ಕೃಷ್ಣಗಾರುಡಿ'ಯ ಪ್ರಪ್ರಥಮ ಪ್ರದರ್ಶನ ಮಂಡ್ಯದಲ್ಲಿ ಏರ್ಪಾಟಾಯಿತು! ಪ್ರಚಾರವೂ ಸಾಕಷ್ಟು ನಡೆದಿತ್ತು. ಸುತ್ತ ಮುತ್ತಲಲ್ಲೆಲ್ಲಾ, ಕಾತುರ, ಕುತೂಹಲ ಕೆರಳುತ್ತಿತ್ತು. ಮೈಸೂರು ಪ್ರಾಂತ್ಯದಲ್ಲೆಲ್ಲಾ ಇದು ಮನೆ ಮಾತಾಯಿತು. ವಿನೋದಕ್ಕೆಂದು ಹಲವರು, ವಿಚಿತ್ರವೇನಿದೆಂದು ಕೆಲವರು, ಪರೀಕ್ಷೆ ಮಾಡಲೆಂದು ಹಲವರು, ನೈಜ ಕಲಾಪ್ರೇಮದಿಂದ ಕೆಲವರು ಆ ದಿನವನ್ನೇ ಎದುರು ನೋಡುತ್ತಿದ್ದರು. ಆ ದಿನ ಹತ್ತಿರವಾಗುತ್ತಿದ್ದ ಹಾಗೆ ನನಗೊಂದು ರೀತಿಯ ಹಿಂಜರಿಕೆ, ಹೆದರಿಕೆ ಪ್ರಾರಂಭವಾಯಿತು. ಗಂಡು ಪಾತ್ರ ಹಾಕಲು ಹುರುಪು ತುಂಬಿದವರು, ಹುರಿದುಂಬಿಸಿದವರು ಹಲವೇ ಮಂದಿ. ಆದರೆ ಹೆದರಿಸುವವರು, ಹೀಗಳೆಯುವವರು, ಹಿಂದೆಳೆಯುವವರು ಅದರ ಹತ್ತರಷ್ಟು. ಹೀಗಾಗಿ ಮಾತಿನ ತಾಲೀಮಿಗೆ ತೊಡಗಿದರೆ ನಾಲಿಗೆಯೇ ಒಣಗುತ್ತಿತ್ತು. ಹಾಡಿನ ಅಭ್ಯಾಸಕ್ಕೆ ಹೊರಟರೆ ಗಂಟಲಿಂದ ಸ್ವರವೇ ಹೊರಡದು. ಅಭಿನಯದ ತಯಾರಿಯಂತೂ ಮುಂದೆಯೇ ಸಾಗದು. "ಏನಾದರೂ ಆಗಬಾರದ್ದು ಆಗಿ ನಾಟಕವೇ ತಪ್ಪಿ ಹೋಗಬಾರದೇ?" ಎಂದು ದೇವರಲ್ಲಿ ಮೊರೆ ಹೋದೆ.

ಮರುದಿನವೇ ಒಂದು ಭಂಡ ಧೈರ್ಯ! 'ಅಂಬುಜಮ್ಮನವರೂ ಬೇರೆಯವರೂ ಸುಮ್ಮಸುಮ್ಮನೆ ನನ್ನನ್ನು ಈ ಪಾತ್ರಕ್ಕೆ ಆಯ್ಕೆ ಮಾಡಿದ್ದಾರೆಯೇ? ಅದಕ್ಕೆ ಸರಿಹೊಂದುವ ಗುಂಡಿಗೆ, ಗಂಡು ನಿಲುವು, ಗಡಸು ಗಂಟಲು ನನಗಿವೆಯೆಂದೇ ಅಲ್ಲವೇ ಅವರು ಹೀಗೆ ತೀರ್ಮಾನಿಸಿರುವುದು? ಹೀಗಿರುವಾಗ ನಾನೇಕೆ ಸುಮ್ಮ ಸುಮ್ಮನೆ ಹೆದರಲಿ?' ಎಂದು ಮತ್ತೆ ಸ್ಥೈರ್ಯ ತಂದುಕೊಳ್ಳುತ್ತಿದ್ದೆ; ತಯಾರಾಗುತ್ತಿದ್ದೆ. ನನಗೆ ಬೆಂಬಲವಾಗಿ ಅಂಬುಜಮ್ಮನೂ ನನ್ನ ಬೆಂಬಿಡದೆ, ನಾನು ಅಭ್ಯಾಸ ಕೈ ಬಿಡದಂತೆ ನೋಡಿಕೊಳ್ಳುತ್ತಿದ್ದರು.

ಹೀಗಿದ್ದರೂ ನನ್ನ ಮನದ ಮೊದಲ ಬಯಕೆಯೇ ಈಡೇರಿಬಿಟ್ಟಿತು! ಆಕಸ್ಮಿಕವಾಗಿ ಕಾರಣಾಂತರದಿಂದ, ಗೊತ್ತಾದ ದಿನದ ನಾಟಕ ನಿಂತೇ ಹೋಯಿತು. 'ಸದ್ಯ, ಬದುಕಿದೆಯಲ್ಲಾ ಬಡಜೀವವೇ' ಎಂದು ನಿಟ್ಟುಸಿರು ಬಿಟ್ಟೆ. ಆದರೇನು ಅಂಬುಜಮ್ಮ ಬಿಡುತ್ತಾರೆಯೇ? ಹತ್ತಿರದಲ್ಲೇ ಮತ್ತೊಂದು ದಿನ ನಾಟಕ ನಡೆಯಲಿದೆ ಎಂದು ಬೋರ್ಡ್ ಬರೆಸಿಯೇ ಬಿಟ್ಟರು. ಟಾಂಟಾಂ ಹೊಡೆಸಿಯೇ ಬಿಟ್ಟರು. ಜಟಕಾಬಂಡಿಗಳ ಮೂಲಕ ಕೂಗಿಸಿಯೇ ಬಿಟ್ಟರು!

ಆ ಮತ್ತೊಂದು ದಿನವೂ ಹತ್ತಿರ- ಹತ್ತಿರ ಬಂದೇ ಬಿಟ್ಟಿತು. ಆದರೆ ನನಗೋ ಕಲಿತ ಮಾತುಗಳೆಲ್ಲ ಮರೆತು - ಮರೆತು ಹೋಗುತ್ತಿದ್ದವು. ಹೇಳಿಸಿಕೊಂಡ ಹಾಡುಗಳೆಲ್ಲ ಹರಕು- ಮುರುಕಾಗುತ್ತಿದ್ದವು. ನಟನೆಯ ನಡೆ- ನಿಲುವುಗಳೆಲ್ಲ ಹಿಂದು - ಮುಂದಾಗುತ್ತಿದ್ದವು. ಹೀಗಿರುವಾಗ ರಂಗ ಹತ್ತುವುದು ಹೇಗೆ? ಅಭಿನಯ ನೀಡಿ, ಮರ್ಯಾದೆಯಾಗಿ ಹೊರಬರುವುದಾದರೂ ಹೇಗೆ? ಈ ಚಿಂತೆಯೇ ನನ್ನನ್ನು ಕಾಡಹತ್ತಿತ್ತು. ಊಟವೂ ಸರಿಯಾಗಿ ಸೇರದು, ನೆಮ್ಮದಿಯಾಗಿ ನಿದ್ದೆಯೂ ಬಾರದು.

ನಾಟಕದ ದಿನ ಕೊನೆಗೂ ಬಂದೇ ಬಿಟ್ಟಿತು. ಅಂದು ಅಭ್ಯಾಸಕ್ಕಿಂತ ನಾನು ಹೆಚ್ಚಾಗಿ ಮಾಡಿದ್ದು ದೇವರ ಧ್ಯಾನ! ಅವನ ಮೇಲೆ ಎಲ್ಲ ಭಾರವನ್ನೂ ಹಾಕಿದೆ. ನನಗೇನೋ ಮುಂದೇನಾದೀತು ಎಂದು ಊಹಿಸಲೂ ದುಸ್ಸಾಧ್ಯವಾಗಿತ್ತು. ಮೊದಲ ದೃಶ್ಯದಲ್ಲಿಯೇ ನನ್ನ ಪಾತ್ರ. ಎದೆಯಲ್ಲಿ ಏನೋ ಢವಢವ, ಮೈಯ್ಯಲ್ಲೆಲ್ಲಾ ನಡುಕ. ಆದರೂ ಮೊಂಡು ಧೈರ್ಯ ಮಾಡಿದೆ. 'ಅಡಿಯ ಮುಂದಿಡೆ ಸ್ವರ್ಗ, ಹಿಂದಿಡೆ, ನರಕ' ಎಂಬ ನಾಣ್ಣುಡಿಯೂ ದಿಢೀರನೆ ನೆನಪಿಗೆ, ನನ್ನ ನೆರವಿಗೆ ಬಂತು.

## ಗಂಡುಡುಗೆಯಲಿ ಗಂಡುಗಲಿ!

ಮೊದಲ ಬೆಲ್ ಆಯಿತು. ಪರದೆಯ ಬದಿಯಿಂದೊಮ್ಮೆ ರಂಗಮಂದಿರವನ್ನೆಲ್ಲಾ ಕದ್ದು ನೋಡಿದೆ. ಜನ ಜಾತ್ರೆಯೇ ನೆರೆದಿದೆ. ಚೆನ್ನಾಗಿ ಪ್ರಚಾರ ನಡೆದಿದ್ದರಿಂದ ಹೊಸ ಪ್ರಯೋಗ ನೋಡಲು ಎಲ್ಲರಿಗೂ ಕಾತುರ, ಕುತೂಹಲ. ಸಂಭಾಷಣಾ ಪುಸ್ತಕವೊಂದನ್ನು ಸ್ನೇಹಿತೆಯೊಬ್ಬಳಿಗೆ ನೀಡಿದೆ. ಸೈಡ್‌ವಿಂಗ್‌ನಲ್ಲೇ ನಿಂತಿದ್ದು, ಮಾತು ಮರೆತರೆ ನೆನಪಿಸಲು ಕೋರಿದೆ. ನನ್ನ ಇಡೀ ರಂಗಜೀವನದಲ್ಲೇ ನಾನು ಹೀಗೆ ಮಾಡಿದ್ದು ಅದೇ ಮೊದಲು. ಎಲ್ಲ ದೇವಾನುದೇವತೆಗಳನ್ನು ನೆನೆದೆ. 'ಹಾಲಲ್ಲಾದರೂ ಹಾಕು- ನೀರಲ್ಲಾದರೂ ನೂಕು' ಎನ್ನುತ್ತಾ ಹರಿಸ್ಮರಣೆ ಮಾಡಿದೆ. ಕೈ ಕಾಲು ನಡುಗುತ್ತಿತ್ತು, ಕಂಠ ಕೈ ಕೊಡುತ್ತಿತ್ತು.

ರಾಜಸಭೆಯ ದೃಶ್ಯ. ಪಾಂಡವರಾಜರೆಲ್ಲರೂ ಕುಳಿತಿದ್ದಾರೆ. ನಾರದರೂ ಹಾಜರಾಗಿದ್ದಾರೆ. ತೀವ್ರ ಮಂತ್ರಾಲೋಚನೆ ನಡೆದಿದೆ. ಆಗ ನನ್ನ ಪ್ರವೇಶವಾಗಬೇಕು. ಮೊದಲಿಗೇ ಸುದೀರ್ಘ ಸಂಭಾಷಣೆ ಒಪ್ಪಿಸಬೇಕು. ರಂಗಸ್ಥಳವನ್ನು ಬಾಗಿ ಮುಟ್ಟಿ ನಮಿಸಿ, ಕೈಯನ್ನು ಕಣ್ಣಿಗೊತ್ತಿಕೊಂಡೆ. ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತಾ ಹಾಗೂ ಹೀಗೂ ರಂಗವನ್ನು ಪ್ರವೇಶಿಸಿಯೇ ಬಿಟ್ಟೆ. ಆಗ ಇದ್ದಕ್ಕಿದ್ದಂತೆಯೇ ಅಚ್ಚರಿಯೊಂದು ನಡೆಯಿತು: ನೋಡುಗರು ಮಹಿಳೆಯರನ್ನು ಸಾಮಾನ್ಯವಾಗಿ ಗಂಡು ಪಾತ್ರದಲ್ಲಿ ಕಂಡಿದ್ದೇ ಇಲ್ಲ. ಕೇಳಿಯೂ ಅರಿಯರು. ಅದರಲ್ಲೂ ಗಂಡುಗಲಿ ಭೀಮನ ತೊಡಿಗೆ ತೊಟ್ಟ ಹೆಣ್ಣು ಮಗಳು! ಅವರು ಊಹಿಸಲು ಕೂಡಾ ಸಾಧ್ಯವಿಲ್ಲದಂತಹ ಪ್ರಸಂಗ. ನೋಡಿದರೂ ನಂಬಲಾಗದ ಪರಿಸ್ಥಿತಿ. ಇದು ನೋಡುಗರ ಮನಸ್ಸಿಗೆ ಹಠಾತ್ತನೆ ಹೊಳೆದಿರಬೇಕು. ಹೀಗಾಗಿ ನಾನು ರಂಗಕ್ಕೆ ಕಾಲಿಟ್ಟೊಡನೆಯೇ ದೊಡ್ಡದಾಗಿ ಚಪ್ಪಾಳೆಯ ಗಡಚಿಕ್ಕುವ ಶಬ್ದ. 'ಮಹಿಳಾ ಭೀಮ' ನಿಗೆ ಭವ್ಯ ಸ್ವಾಗತವೇ ದೊರೆಯಿತು. ನನಗೆ ಭಂಡ ಧೈರ್ಯ ತುಂಬಿದಂತಾಯಿತು. ನನಗೆ ಅದೆಲ್ಲಿಂದಲೋ ಭೀಮಬಲವೇ ಬಂದು ಬಿಟ್ಟಿತು. ಆತ್ಮ ವಿಶ್ವಾಸ ಆವರಿಸಿತು. 'ಚಪ್ಪಾಳೆಗೆ ಎಂಥಾ ಅದ್ಭುತ ಶಕ್ತಿಯಿದೆ!' ಎಂಬ ದಿವ್ಯ ಸತ್ಯ ನನಗೆ ನೂರಕ್ಕೆ ನೂರರಷ್ಟು ಮನವರಿಕೆಯಾದದ್ದು ಅವತ್ತೇ. ನನ್ನ ಕೈ - ಕಾಲು ನಡುಕ ಎಲ್ಲಿ ಓಡಿಹೋಯಿತೋ?

ಗಂಟಲೂ ಸಡಿಲ ಬಿಟ್ಟಿತು. ಮಾತುಗಳು ದಡದಡನೆ ನೆನಪಿಗೆ ಬಂತು. ಉದ್ದನೆಯ ಸಂಭಾಷಣೆಯನ್ನು ತಡಮಾಡದೆ, ತಡವರಿಸದೇ ಒಪ್ಪಿಸಿಬಿಟ್ಟೆ. ಅಗತ್ಯ ಹಾವ- ಭಾವ, ಠೀವಿ- ಠೇಂಕಾರಗಳನ್ನು ದಿಟ್ಟವಾಗಿ ಪ್ರದರ್ಶಿಸಿದೆ. ನೋಡುಗರ ಪ್ರತಿಕ್ರಿಯೆಗಾಗಿ ಒಂದೆರಡು ಕ್ಷಣ ತಡೆಹಿಡಿದೆ. ಆಗ ಬಂತು ನೋಡಿ, ಮತ್ತೊಮ್ಮೆ ಚಪ್ಪಾಳೆಯ ಸುರಿಮಳೆ. 'ಹೋ! ಹೋ!' ಎಂಬ ಮೆಚ್ಚುಗೆ. ಇನ್ನು ನನ್ನನ್ನು ಹಿಡಿಯುವವರಾದರೂ ಯಾರು? ಮಹಿಳಾ ಭೀಮ ವಿಜೃಂಭಿಸಿಯೇ ಬಿಟ್ಟ. ನಾನು ಗೆದ್ದೇ ಬಿಟ್ಟೆ!!

ಎರಡನೇ ದೃಶ್ಯ: ನಾರದ ಭೀಮಾರ್ಜುನರನ್ನು ಅಪಹಾಸ್ಯ ಮಾಡುತ್ತಿದ್ದಾನೆ. 'ನಿಮಗೇನಪ್ಪಾ, ಕುದುರೆ ಶಾಲೆ - ಅಡಿಗೆ ಶಾಲೆ ನೋಡಿಕೊಳ್ಳುವ ಕೆಲಸ? ನಿಮ್ಮ ದೊಡ್ಡಸ್ತಿಕೆ- ಗಂಡಸ್ತಿಕೆಗೆ ತಕ್ಕಂಥ ದೊಡ್ಡ ಜವಾಬ್ದಾರಿ ' ಎಂದವನ ಅಣಕ. ಆಗ ಭೀಮನಿಗೆ ರೋಷವೋ ರೋಷ. ಬಡ ನಾರದನನ್ನು ಗದೆಯಿಂದ ಸದೆ ಬಡೆವಂಥ ಆಕ್ರೋಶ. ತನ್ನೆಲ್ಲ ಬಲವನ್ನೊ ಬಣ್ಣಿಸಿಕೊಂಡು, ಬಡಾಯಿ ಕೊಚ್ಚಿಕೊಂಡು ಪ್ರದರ್ಶಿಸುವ ಆವೇಶ. ನೆನೆದರೆ ಈಗಲೂ ಸೋಜಿಗವಾಗುತ್ತದೆ. ನನಗೆಲ್ಲಿತ್ತೋ ಆ ಪೌರುಷ? ವೀರಾವೇಶ? ಅಟ್ಟಹಾಸ ಮಾಡುತ್ತಾ, ನಾರದನನ್ನು ಅಟ್ಟಿ ಗದೆಯನ್ನು ಒಂದೇ ನೆಗೆತಕ್ಕೆ ಮೇಲೆ ಹಿಡಿದೆತ್ತಿದೆ. ಕೋಪೋದ್ರಿಕ್ತನಾಗಿ ಆರ್ಭಟಿಸಿದೆ. ನೋಡುಗರಿಗೆ ಖುಷಿಯೋ ಖುಷಿ. ಕೂತಿದ್ದ ಖುರ್ಚಿ, ನೆಲದಿಂದ ಮೇಲೆದ್ದು ನಿಂತು, ಬಿಟ್ಟೂ- ಬಿಡದೆ ಚಪ್ಪಾಳೆ ತಟ್ಟತೊಡಗಿದರು. 'ಭೇಷ್, ಶಭಾಷ್' ಕೂಗಿದರು. 'ಒನ್ಸ್ ಮೋರ್'ಎಂದು ಕೋರಿದರು. ನನಗೋ ತೀವ್ರ ರೋಮಾಂಚನ, ಪುಲಕ.

ನನಗೇ ಅರಿವಿಲ್ಲದಂತೆ ನನ್ನ ಕಂಗಳು ಒದ್ದೆಗೊಂಡವು, ಆನಂದ ಭಾಷ್ಪದಿಂದ. ಆ ಕಡೆ - ಈ ಕಡೆ ನೋಡಿ, ಯಾರಿಗೂ ಕಾಣದಂತೆ ಕಣ್ಣೊರೆಸಿಕೊಂಡೆ. ಇಮ್ಮಡಿ ಉತ್ಸಾಹ. ಉಲ್ಲಾಸಗಳಿಂದ ಉಳಿದ ದೃಶ್ಯಗಳಲ್ಲೂ ಮನಸ್ಸಿಟ್ಟು ನಟಿಸಿದೆ. ಮತ್ತೆ ಮತ್ತೆ ಜನರ ಪ್ರೋತ್ಸಾಹ, ಪ್ರಶಂಸೆ. ನಾಟಕ ಮುಗಿದಾಗ ನನಗೆ ಏನೋ ಸಂತೃಪ್ತಿ, ಸಾರ್ಥಕಭಾವ. ಹೊಸದೇನನ್ನೋ ಸಾಧಿಸಿದ ಹಾಗೆ, ಹಿರಿಯದಾದುದೇನನ್ನೋ ಹಿಡಿದು ತಂದ ಹಾಗೆ, ಹಿಮಾಲಯವನ್ನೇ ಹತ್ತಿ ಬಿಟ್ಟ ಹಾಗೆ ಹರ್ಷ- ಹಿರಿಹಿರಿ ಹಿಗ್ಗು- ಹೆಮ್ಮೆ. ನಾಟಕ ಮುಗಿಸಿ ಬಣ್ಣದ ಕೋಣೆಗೆ ಬರುತ್ತಿದ್ದ ಹೀಗೆ ಸಹಕಲಾವಿದರು, ಸ್ನೇಹಿತೆಯರೆಲ್ಲ ಮೆಚ್ಚುಗೆಯ ಮಳೆ ಸುರಿಸಿದರು. ತಮಗಾದ ಸಂತೋಷವನ್ನು ಹಂಚಿಕೊಂಡರು. ನನ್ನ ಕೈಕುಲುಕಿದವರೆಷ್ಟೋ, ತಬ್ಬಿ ಮುತ್ತಿಟ್ಟವರೆಷ್ಟೋ, ನೆಟಿಕೆ ಮುರಿದವರೆಷ್ಟೋ. ಅಂಬುಜಮ್ಮನವರಂತೂ ಹಿಗ್ಗಿ ಹೀರೇಕಾಯಿ ಆಗಿದ್ದರು. "ತುಂಬಾ ಚೆನ್ನಾಗಿ ಮಾಡಿದೆ ನನ್ನಾಯಿ. ನನ್ನ ಗೆಲ್ಲಿಸಿ ಬಿಟ್ಟೆಯಲ್ಲೇ ಮಾರಾಯ್ತಿ" ಎಂದು ಅಪ್ಪಿ ಮುದ್ದಾಡಿದರು. ಒಳಗುಟ್ಟು ನನಗೆ ಮಾತ್ರ ಗೊತ್ತಿತ್ತು. ಇದರಲ್ಲಿ ನನ್ನದೆಂಬುದೇನಿರಲಿಲ್ಲ. ನಾ ನಂಬಿದ



ದೈವ ನನ್ನ ಕೈ ಬಿಟ್ಟಿರಲಿಲ್ಲ, ಅಷ್ಟೆ. ನನ್ನೊಳಗೆ ನಿಂತು ಸೂತ್ರ ಹಿಡಿದು ಪಾತ್ರ ಮಾಡಿಸಿದ್ದಾತ ಆ ಜಗನ್ನಾಟಕ ಸೂತ್ರಧಾರಿಯೇ!

ನನ್ನ ಬಣ್ಣದ ಬದುಕಿನಲ್ಲೇ, ಬಾಳ ನಾಟಕದಲ್ಲೇ ಇದೊಂದು ಮಹತ್ವದ ಮೆಟ್ಟಿಲು, ಮುಖ್ಯ ಮೈಲಿಗಲ್ಲು, ಮರೆಯಲಾಗದ ಮಜಲು, ಹೊಸ ಹಾದಿಯ ಹೊಸ್ತಿಲು. ಅಂದು ನಾ ಹಿಡಿದ ಗದೆ ಇಂದಿಗೂ ನನ್ನ ಬೆಂಬಲಕ್ಕಿದೆ. ಹಲವು ಹತ್ತು ಹೆಣ್ಣು ವೇಷಗಳಿಂದ ಗಳಿಸಲಾಗದ ಹೆಸರು - ಹಣ, ಹಿಗ್ಗು - ಹೆಮ್ಮೆ, ತೃಪ್ತಿ- ಧನ್ಯತೆಯನ್ನು ನಾನು ಧರಿಸಿದ ಗಂಡು ಪಾತ್ರಗಳು ಮಾತ್ರವೇ, ಅದರಲ್ಲೂ ಭೀಮನ ಪಾತ್ರವೇ ತಂದು ಕೊಟ್ಟಿದೆ. ಇದರಲ್ಲಿ ಎಳ್ಳಷ್ಟೂ ಉತ್ಪ್ರೇಕ್ಷೆ ಇಲ್ಲ. ನಂತರ ಅದೆಷ್ಟೋ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ಪುರುಷ ಪಾತ್ರಗಳನ್ನು ಸಲೀಸಾಗಿ, ಲೀಲಾಜಾಲವಾಗಿ ನಿರ್ವಹಿಸಿದ್ದೇನೆ. ವಿವಿಧ ವಯೋಮಾನದ ಗಂಡು ವೇಷಗಳನ್ನು ಧರಿಸಿದ್ದೇನೆ. ಆದರೆ ಈಗಲೂ ಜನ ನನ್ನನ್ನು 'ಭೀಮನ ಪಾರ್ಟು ನಾಗರತ್ನಮ್ಮ' ಎಂದೇ ಕರೆಯುತ್ತಾರೆ, ಗುರುತಿಸುತ್ತಾರೆ, ಗೌರವಿಸುತ್ತಾರೆ. ಆಗೆಲ್ಲ ನನ್ನ ಹಿಗ್ಗಿಗೆ ಪಾರವಿಲ್ಲ, ಹೆಮ್ಮೆಗೆ ತೀರವಿಲ್ಲ.

ಅಂಬುಜಮ್ಮನವರೇ ಅದಕ್ಕೆಲ್ಲ ಕಾರಣಕರ್ತರು. ನನಗೊಂದು ಹೊಸ ರೂಪು- ಹೊಸ ಹುರುಪು, ಹೊಸ ಹುಟ್ಟು- ಹೊಸ ಪಾರ್ಟು ಕೊಟ್ಟು ಹರಸಿದ ಪುಣ್ಯಾತಗಿತ್ತಿ ಆಕೆ. ಅವರ ಒತ್ತಾಯ, ಒತ್ತಾಸೆ, ಒತ್ತಡವಿಲ್ಲದೆ ಈ ನಾಗರತ್ನಮ್ಮ ಗಂಡು ಪಾತ್ರ ವಹಿಸುತ್ತಲೂ ಇರಲಿಲ್ಲ, ಇಡೀ ರಾಜ್ಯದಲ್ಲೆಲ್ಲ ಹೆಸರು ಮಾಡುತ್ತಲೂ ಇರಲಿಲ್ಲ. ಆಕೆಗೆ ನಾನೆಂದೂ ಚಿರಋಣಿ. ಅವರ ನೆನಪೇ ನನಗೆ ಸದಾ ಹಸಿರು. ನಾನು ತಂಪು ಹೊತ್ತಿನಲ್ಲೆಲ್ಲಾ ಸ್ಮರಿಸುವುದು ಅಂಬುಜಮ್ಮನವರ ಹೆಸರನ್ನೇ.

•

## ಒಲಿದು ಬಂದಿತು, ಮಾಲಿಕ ಪದವಿ

ನನ್ನ ಬಲಭೀಮನ ಪಾತ್ರವೂ, ಉಳಿದ ಕಲಾವಿದೆಯರು ಗಂಡು ಪಾತ್ರಗಳಲ್ಲಿ ಕಲಿಗಳಾಗಿ, ಗಂಡುಗಲಿಗಳಾಗಿ ಅಭಿನಯಿಸಿದ್ದೂ ಜನಮನ ಸೆಳೆದವು. ಗಲ್ಲಾಪೆಟ್ಟಿಗೆಯೂ ತುಂಬಿತು. ಹೋದಲ್ಲಿ - ಬಂದಲ್ಲಿ, ಪತ್ರಿಕೆಗಳಲ್ಲಿ ನಮ್ಮ ಬಗ್ಗೆ ಮೆಚ್ಚುಗೆಯ ಮಾತುಗಳು. ಮತ್ತೆ ಮತ್ತೆ ನಾಟಕಗಳನ್ನಾಡಲು ಒತ್ತಾಯ. ಅಂಬುಜಮ್ಮನವರಿಗೆ ಆನಂದವೋ ಆನಂದ. ಮ್ಯಾನೇಜರ್ ದೊರೆಸ್ವಾಮಿಯಂತೂ ಗಿರಿಗೆ, ಅಲ್ಲಲ್ಲ ಮುಗಿಲಿಗೇ ಏರಿದವರಂತಿದ್ದರು. ಈ ಗೆಲುವಿನಿಂದ ಅವರಿಗೆ ಬೇರೊಂದು ಆಲೋಚನೆ ಬಂದು ಕುಟ್ಟೆ ಹುಳದಂತೆ ಕೊರೆಯತೊಡಗಿತು. ಅದನ್ನು ನನ್ನ ತಲೆಗೂ ಹಾಕಿ ಕಾಟ ಕೊಡಲಾರಂಭಿಸಿದರು. "ಹೇಗಿದ್ದರೂ ನಾಟಕದ ಜೀವಾಳ ಭೀಮನ ಪಾತ್ರವೇ. ಅದನ್ನು ಜಾಂ - ಜಾಂ ಅನ್ನುವಂತೆ ಮಾಡಿ ಬೆನ್ನು ತಟ್ಟಿಸಿಕೊಂಡಿದ್ದೀಯ. ಹೆಸರುವಾಸಿಯಾಗಿ ಬಿಟ್ಟಿದೀಯ. ನಿನ್ನ ಒಡೆತನದಲ್ಲೇ ಒಂದು ಕಂಪನಿ ಕಟ್ಟಿ, ನಾಟಕ ಆಡಿದರೆ ಇನ್ನೂ ಹೆಚ್ಚು ಹಣ -ಹೆಸರು ಬರೋಲ್ಲವೆ?" ಎಂಬುದು ಅವರ ಚಿಂತನೆ, ದೂರಾಲೋಚನೆ. ಆದರೆ ನನಗೇಕೋ ಇದು ಸ್ವಲ್ಪವೂ ಹಿತವಾಗಿ ಕಾಣಲಿಲ್ಲ. "ಅಂಬುಜಮ್ಮನವರಿಂದಲೇ ನಾನು ಇಷ್ಟರ ಮಟ್ಟಿಗೆ ಮುಂದೆ ಬಂದೆ. ಹೀಗಿರುವಾಗ ಅವರನ್ನು ಅಲಕ್ಷಿಸಿ, ಹೊರಬಂದು ಹೊಸ ಕಂಪನಿ ಕಟ್ಟುವುದೇ? ನಾನೇ ಮಾಲಿಕಳಾಗುವುದೆಂದರೇನು? ಸಲ್ಲದು. ಇಷ್ಟಕ್ಕೂ ಕಂಪನಿ ನಡೆಸುವ ತಾಕತ್ತು - ಚಾಕಚಕ್ಯತೆ ನನಗೆಲ್ಲಿಂದ ಬರಬೇಕು? ಏನಿದ್ದರೂ ಮಾಲೀಕರು ಕೊಟ್ಟ ಪಾತ್ರ ಮಾಡಿ, ಅವರ ಅಪ್ಪಣೆ ಪಾಲಿಸಿ, ಶ್ರದ್ಧೆಯಿಂದ ಅವರ ಮನಕ್ಕೊಪ್ಪುವ ಹಾಗೆ, ಜನ ಮೆಚ್ಚುವ ಹಾಗೆ ಸಂಭಾಷಣೆ, ನಟನೆ ಒಪ್ಪಿಸುವುದೊಂದೇ ನನಗೆ ಗೊತ್ತು. ಆಡಳಿತದ ಗೋಜು- ಗೊಂದಲ- ಗಲಿಬಿಲಿ ಎಲ್ಲ ನನಗೆ ಒಗ್ಗದು, ಈ ಉಸಾಬರಿಯೇ ಬೇಡ." ನನ್ನ ನಿಲುವನ್ನು ದೊರೆಸ್ವಾಮಿಯವರಿಗೆ ಪರಿಪರಿಯಾಗಿ ವಿವರಿಸಿದೆ.

ಆದರೆ ಅವರದೊಂದೇ ಪಟ್ಟು : "ನೀನು ಹೆಸರಿಗೆ ಮಾತ್ರ ಮಾಲಿಕಳಷ್ಟೇ, ಎಲ್ಲ ಹೊಣೆ- ಜವಾಬ್ದಾರಿ ನನ್ನ ಪಾಲಿಗೆ ಬಿಡು. ನೀನಿದಕ್ಕೆ ಒಪ್ಪಲೇಬೇಕು" ಎಂಬ ಪುಸಲಾವಣೆ.



ಅವರಿವರ ಕೈಲೂ ಹೇಳಿಸಿದರು. ಎಷ್ಟು ಒತ್ತಡ ಹೇರಬಹುದೋ, ಏನೇನು ಉಪಾಯ ಹೂಡಬಹುದೋ ಅಷ್ಟನ್ನೂ ಮಾಡಿದರು. ಜೊತೆಗೊಂದು ಹೊಸವರಸೆ ತೆಗೆದರು. "ನಾನು ಒಬ್ಬಿಬ್ಬ ಜ್ಯೋತಿಷಿಗಳನ್ನೂ ವಿಚಾರಿಸಿದ್ದೇನೆ. ಕಂಪನಿ ನಿನ್ನ ಹೆಸರಲ್ಲೇ ಇದ್ದರೆ, ಆಗಿಬರುವುದಷ್ಟೇ ಅಲ್ಲ, ಅದ್ದೂರಿಯಾಗಿ ಏಳಿಗೆಯಾಗುವುದಂತೆ. ನಿನಗೆ ಮಾಲಿಕಳಾಗುವ ಯೋಗ ನಿನ್ನ ಜಾತಕದಲ್ಲೇ ಇದೆಯಂತೆ. ಅದಕ್ಕೆ ಈಗಲೇ ಸಕಾಲ ಎಂದೂ ಹೇಳಿದ್ದಾರೆ". ಅವರ ವಿಶ್ವಾಸ - ಒತ್ತಾಸೆಯ ಬಲೆ, ಜಾಣ್ಮೆ-ಜಾಣ್ನುಡಿಗಳ ಜಾಲದಿಂದ ಜಾರಿಕೊಳ್ಳಲು ನನಗೇಕೋ ಸಾಧ್ಯವಾಗಲೇ ಇಲ್ಲ. ಅಂಬುಜಮ್ಮನವರನ್ನು ಸಂಪರ್ಕಿಸಿ ಸಲಹೆ ಕೇಳಿದೆ ನನಗೋ ಕಲೆ ಒಂದು ಹವ್ಯಾಸವಷ್ಟೇ. ನಾನು ನಾಟಕ ಆಡಿಯೇ, ಆಡಿಸಿಯೇ ಬದುಕು ಸಾಗಿಸಬೇಕಾದ್ದಿಲ್ಲ. ನೀನಾದರೋ ಹೇಳಿ ಕೇಳಿ ವೃತ್ತಿ ಕಲಾವಿದೆ. ನಿನಗಿದೇ ಜೀವನ. ನೀನು ಕಂಪನಿ ಕಟ್ಟಿ ಮುಂದೆ ಬಂದರೆ, ಹಲವು ಕಲಾವಿದರನ್ನಾದರೂ ಮುಂದೆ ತಂದರೆ, ನಿನಗಿಂತ ನನಗೇ ಹೆಚ್ಚು ಸಂತೋಷ. ದೊರೆಸ್ವಾಮಿ ಹೇಳಿದ ಹಾಗೇ ಮಾಡು, ನಿನಗೆ ಒಳ್ಳೆಯದಾಗಲಿ" ಎಂದು ನೇರವಾಗಿ ಹರಸಿಯೇಬಿಟ್ಟರು.

ನಾನು ಒಲ್ಲದೆ ಹೋದರೂ, ಕಂಪನಿಯೊಂದರ ಮಾಲಿಕತ್ವದ ಮಾಲೆಗೆ ನನ್ನ ಕೊರಳನ್ನು ಒಡ್ಡಬೇಕಾಯಿತು. ಇದು ನನ್ನ ಜೀವನದಲ್ಲಿ ಬಹು ದೊಡ್ಡ ಮೈಲಿಗಲ್ಲಾಯಿತು. ಮುಂದಿನ ಬಾಳಗುರಿಯನ್ನೂ ಬದಲಿಸಿತು. ಆಗಲೇ ಹೇಳಿದ ಹಾಗೆ ನನ್ನ ಜೀವನ ಅನಿರೀಕ್ಷಿತ ತಿರುವುಗಳ ಸರಮಾಲೆ. ಯಾವುದಕ್ಕೂ ಪೂರ್ವ ಯೋಚನೆ- ಯೋಜನೆ- ಯತ್ನವಿಲ್ಲ. ಆದರೂ ನನ್ನ ಪಾಲಿನ ದೈವದ ಆ ಕಾಣದ ಕೈ ನನ್ನ ಕೈ ಬಿಡದೆ ನಾ ಹಿಡಿದ ಹಾದಿಯಲ್ಲೇ ಯಶಸ್ವಿಯಾಗಿ ಮುನ್ನಡೆಸಿದೆ. ಕಾಲಕಾಲಕ್ಕೆ ನಾ ಕೈಗೊಂಡ ಕೆಲಸವನ್ನೆಲ್ಲಾ ಕೈ ಹಿಡಿದು ನಡೆಸಿದೆ, ಕೈಗೂಡಿಸಿ ಈಡೇರಿಸಿದೆ.

ಅಂತೂ - ಇಂತೂ, ಬಲವಂತದಿಂದ ನನ್ನ 'ಮಾಲಿಕತ್ವದ' ಕಂಪನಿ ಹುಟ್ಟಿಕೊಂಡಿತು. ಅದಕ್ಕೆ "ಶ್ರೀ ಸ್ತ್ರೀ ನಾಟಕ ಮಂಡಳಿ" ಎಂಬ ಹೆಸರು ಇಟ್ಟೆವು. ಹಿರಿಯ ಕಿರಿಯ ಕಲಾವಿದರನ್ನೆಲ್ಲಾ ಸೇರಿಸಿ ನಾಟಕಕೂಟವೊಂದನ್ನು ಕಟ್ಟಿಯೇ ಬಿಟ್ಟೆವು! ಮ್ಯಾನೇಜರ್ ದೊರೆಸ್ವಾಮಿಗಳು ಮಂಡಲಿಯ ನಾಟಕಗಳನ್ನು ಏರ್ಪಡಿಸಲು ಊರೂರಿಗೆ ಓಡಾಡತೊಡಗಿದರು. ನಾನು ಕೂಡಲೇ ಹೊರಟು ಬರಬೇಕೆಂದು ತಿಪಟೂರಿನಿಂದ ತಂತಿಯನ್ನೂ ಕಳಿಸಿದರು. ಅಲ್ಲೊಂದಿಷ್ಟು ನಾಟಕಗಳನ್ನಾಡಿಸುವ ಯೋಜನೆ ಅವರದು. ಕಾಂಟ್ರಾಕ್ಟ್ ಆಧಾರದ ಮೇಲೆ ಅಲ್ಲಿ ಹನ್ನೆರಡು ನಾಟಕ ಆಡುವುದೆಂದು ನಿರ್ಧಾರವಾಯಿತು. ಒಪ್ಪಂದವೂ ಆಯಿತು.

ತಿಪಟೂರಿನಲ್ಲಿ 'ಕೃಷ್ಣಗಾರುಡಿ'ಯೇ ಮೊದಲ ನಾಟಕ. ಮಕರಂದನ ಪಾತ್ರಕ್ಕೆ ಅಂಬುಜಮ್ಮನ ಕಿರಿಮಗಳು ಸರೋಜಳನ್ನು ದೊರೆಸ್ವಾಮಿಗಳೇ ಗೊತ್ತು ಮಾಡಿದ್ದರು.

ಆದರೆ ಏನಾಯಿತೋ, ಏನೋ? ಆಕೆ ಕಡೆಗಳಿಗೆಯಲ್ಲಿ ಆಗುವುದಿಲ್ಲ ಎಂದು ಬಿಟ್ಟಳು. ನನಗೆ ಮಂಕು ಕವಿಯಿತು. ದೊರೆಸ್ವಾಮಿಗಳಿಗೂ ಆತಂಕ. ಆದರೆ ಅಂಥ ಜಟಿಲ ಪರಿಸ್ಥಿತಿಯಲ್ಲೇ ಅವರ ಬುದ್ಧಿ ಚೆನ್ನಾಗಿ, ಚುರುಕಾಗಿ ಓಡುತ್ತಿದ್ದುದು. ಅದು ಹೇಗೋ ಏನೋ, ಅವರಿಗೆ ನನ್ನ ತಂಗಿ ಮಂಜುಳನ ಮೇಲೆ ಕಣ್ಣು ಬಿತ್ತು. 'ಇವಳೇ ಈ ನಾಟಕದ ಮಕರಂದ' ಎಂದು ನಿಂತ ಗಳಿಗೆಯಲ್ಲೇ ನಿರ್ಧರಿಸಿಬಿಟ್ಟರು! "ಆ ಹಾಸ್ಯಭರಿತ ಪಾತ್ರ ಮಾಡುವಷ್ಟು ಚಾಲಾಕು- ಚಾಣಾಕ್ಷತೆ ಅವಳಿಗೆ ಏಕಾಏಕಿ ಎಲ್ಲಿಂದ ಬಂದೀತು" ಎಂದು ನನ್ನ ವಾದ. "ನಿನಗೇಕೆ? ಅವಳಿಂದಲೇ ಆ ಪಾತ್ರ ಮಾಡಿಸಿ ಸೈ ಎನಿಸುವುದು ನನ್ನ ಹೊಣೆ" ಎಂದು ಅವರು ತಕ್ಷಣವೇ ತಯಾರಿ, ತರಬೇತಿಯನ್ನು ಶುರು ಮಾಡಿಯೇ ಬಿಟ್ಟರು. ಅವರ ಧೈರ್ಯ - ಸಾಮರ್ಥ್ಯಕ್ಕೆ ಸಮ್ಮತ ಹೊಡೆದೆ ನಾನು.

ಒಂದೇ ದಿನಕ್ಕೆ ಮಂಜುಳ ಮಕರಂದನ ಪಾತ್ರಕ್ಕೆ ಸಿದ್ಧಳಾಗಿ ಬಿಟ್ಟಳು. ಮರುದಿನ ರಂಗದ ಮೇಲಿನ ಅವಳ ಅಭಿನಯ ಎಲ್ಲರನ್ನೂ ರಂಜಿಸಿತು. ಜನ ನಕ್ಕು ನಲಿದರು. ಅವಳು ಆ ಪಾತ್ರಕ್ಕೆ ಹೊಸಬಳು ಎಂದು ಯಾರಿಗೂ ಅನ್ನಿಸಲೇ ಇಲ್ಲ. 'ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲಾ' ಎಂಬಂತೆ ಅವಳು ನನ್ನ ತಂಗಿಯೇ ಎನ್ನುವುದನ್ನು ರಂಗದ ಮೇಲೆ ಚುರುಕಾಗಿ ನಿರೂಪಿಸಿಯೇ ಬಿಟ್ಟಳು. ಅಂದಿನಿಂದ 'ಮಕರಂದ ಎಂದರೆ ಮಂಜುಳ' ಎನಿಸುವಷ್ಟು ಪ್ರಸಿದ್ಧಳಾದಳು. ಹಾಸ್ಯಾಭಿನಯಕ್ಕೆ ಹೆಸರುವಾಸಿಯಾದಳು. ಯಾರ್ಯಾರಲ್ಲಿ ಎಂಥೆಂಥ ಪ್ರತಿಭೆ ಹುದುಗಿರುತ್ತದೆಯೋ? ಅದನ್ನು ಅರಿತು ಗುರುತಿಸಬಲ್ಲ, ಅರಸಿ ಹೊರತರಬಲ್ಲ ಸಹೃದಯರು ಯತ್ನಿಸಿದಾಗ ತಾನೇ ಅದು ಅರಿವಿಗೆ, ಬೆಳಕಿಗೆ ಬಂದೀತು? ಈ ಮಾತಿನ ಸತ್ಯವನ್ನು ನಾನು ಅಂದು ಕಂಡುಕೊಂಡೆ. ತಿಪಟೂರಿನಲ್ಲಿ ಹನ್ನೆರಡು ನಾಟಕಗಳು ಮುಗಿದವು. ಸ್ತ್ರೀಯರೆಲ್ಲ ಸೇರಿ ಪುರುಷ ಪಾತ್ರಧಾರಿಗಳಾಗಿ ರಂಗದ ಮೇಲೆ ಮೆರೆದು 'ಶ್ರೀ ಸ್ತ್ರೀ ನಾಟಕ ಮಂಡಳಿ'ಗೆ ಹೆಸರು, ಮೆರಗು ತಂದರು. ನೋಡುಗರನ್ನು ಬೆರಗುಗೊಳಿಸಿದರು. ಬೆಂಗಳೂರಿಗೆ ವಾಪಸ್ಸು ಬಂದು ಒಂದಷ್ಟು ದಿನ ಬಿಡುವು ಅನುಭವಿಸಿದೆವು.

ಜಮಖಂಡಿಯ 'ಗಜಾನನ ನಾಟಕ ಮಂಡಳಿ' ಕೊಳ್ಳೇಗಾಲದಲ್ಲಿ ಕ್ಯಾಂಪ್ ಹಾಕಿತ್ತು. ಅಲ್ಲಿ ಅವರ ನಾಟಕಗಳೆಲ್ಲಾ ಮುಗಿದಿದ್ದವು. ಹೊಸದಾಗಿ ಆರಂಭವಾಗಿದ್ದ ನಮ್ಮ ಕಂಪನಿಯಿಂದ ಒಂದೆರಡು ನಾಟಕಗಳನ್ನು ಅಲ್ಲಿ ಆಡಿಸಬಾರದೇಕೆ ಎಂದವರ ಯೋಜನೆ. ನಮ್ಮ ತಂಡಕ್ಕೆ ಕರೆ ಕಳಿಸಿದರು, ನಾವು ಅಲ್ಲಿಗೆ ಹೋದೆವು. 'ಕೇವಲ ಒಂದೆರಡೇಕೆ? ಹತ್ತು ನಾಟಕ ಆಡಿ' ಎಂದು ಕಾಂಟ್ರಾಕ್ಟ್ ಮಾಡಿಕೊಂಡರು. ಸರಿ, ಇಷ್ಟೊಂದು ನಾಟಕ ಎಂದ ಮೇಲೆ ಪ್ರಚಾರವೂ ಸಾಕಷ್ಟು ಆಗಬೇಕಲ್ಲ? ಹೀಗಾಗಿ ಕರಪತ್ರವನ್ನು ಅಚ್ಚಿಗೆ



ಕೊಡಬೇಕಾಯಿತು. ಆಗ ಪ್ರಶ್ನೆಯೊಂದು ಎದುರಾಯಿತು. "ಹ್ಯಾಂಡ್‌ಬಿಲ್‌ಗಳಲ್ಲಿ ಕಂಪನಿ ಹೆಸರಿದ್ದರೆ ಸಾಲದು, ಮಾಲಿಕರ ಹೆಸರೂ ಹಾಕಬೇಕಾದ್ದು ಸಂಪ್ರದಾಯ. ನಿಮ್ಮ ಹೆಸರನ್ನೇ ಪ್ರಿಂಟ್ ಮಾಡುತ್ತೇವೆ" ಎಂದರವರು. ನಾನೋ ಇದುವರೆಗೆ ನಾಮಮಾತ್ರ ಮಾಲಿಕಳಾಗಿದ್ದೆ. ಯಾವುದೇ ವ್ಯವಹಾರ ನನಗೆ ತಿಳಿಯದು. ಹಣಕಾಸಿನ ಲೆಕ್ಕಾಚಾರವನ್ನೂ ನಾನರಿಯೆ. ಮಾಲೀಕರ ಹೊರೆ- ಹೊಣೆ ಏನೆಂದೂ ಗೊತ್ತಿಲ್ಲ. ಆದರೂ ಈ ಕರಪತ್ರದ ಸಲುವಾಗಿ ನಿಮ್ಮ ಹೆಸರನ್ನು ಮುದ್ರಿಸಲೇ ಬೇಕು, ಎಂದು ನಾಟಕ ಮಂಡಲಿಯವರೆಲ್ಲ ಒಟ್ಟಾಗಿ ಧೈರ್ಯ ಹೇಳಿದರು. ಯಾವುದೇ ಆಗು- ಹೋಗುಗಳಲ್ಲೆಲ್ಲ ಜೊತೆಗಾರರಾಗಿ ತಾವಿರುತ್ತೇವೆಂದು ಭರವಸೆ ಕೊಟ್ಟರು. ಹೀಗಾಗಿ ನಾನು ಹೂಂಗುಟ್ಟಿದೆ. ಬಾಯಿಮಾತಿನಲ್ಲಿ ಮಾಲಿಕಳಾಗಿದ್ದವಳು ಬರಹದಲ್ಲೂ ಯಜಮಾನಿಕೆ ಸ್ಥಾಪಿಸಿದೆ! "ಶ್ರೀ ಸ್ತ್ರೀ ನಾಟಕ ಮಂಡಲಿ- ಆರ್. ನಾಗರತ್ನಮ್ಮ ಪಾರ್ಟಿ" ಹೆಸರಿನಲ್ಲಿ ಸಹಸ್ರಾರು ಕರಪತ್ರಗಳು ಅಚ್ಚಾಗಿ ಬಂದವು. ಕೊಳ್ಳೇಗಾಲದ ಹಾಗೂ ಸುತ್ತ ಮುತ್ತಲ ಊರು -. ಕೇರಿಗಳಲ್ಲೆಲ್ಲ ಹಂಚಲ್ಪಟ್ಟವು. ಪ್ರಚಾರ - ಪ್ರಸಿದ್ಧಿ ಧಾರಾಳವಾಗಿ ದೊರೆಯಿತು.

ದೊರೆಸ್ವಾಮಿಯವರು ನನಗಾಗಿ ಕಂಪನಿ ಕಟ್ಟಿಕೊಟ್ಟರು, ಮಾಲಿಕಳೆಂಬ ಪಟ್ಟವನ್ನೂ ಕಟ್ಟಿದರು. ಜಮಖಂಡಿ ಕಂಪನಿಯವರಂತೂ ಅದನ್ನು ಜಗಜ್ಜಾಹೀರು ಮಾಡಿ ಆ ಪಟ್ಟವನ್ನು ನನಗೆ ಗಟ್ಟಿಯಾಗಿ, ಖಾಯಂ ಆಗಿ ಉಳಿಸಿಕೊಟ್ಟರು! ಕೊಳ್ಳೆಗಾಲದಲ್ಲಿ ಎಲ್ಲ ನಾಟಕಗಳೂ ಚೆನ್ನಾಗಿ ನಡೆದವು. ನಾವು ಸ್ವಲ್ಪ ದುಡ್ಡನ್ನೂ ಕಂಡೆವು. ಕ್ಯಾಂಪ್ ಮುಗಿಯಿತು. ಧನ್ಯತಾ ಭಾವದಿಂದ ಬೆಂಗಳೂರಿಗೆ ಮರಳಿ ಬಂದೆವು.

ಏನಿದು ವಿಧಿಯ ಲೀಲೆ? ಕೇವಲ ನಟಿಯಾಗಿದ್ದವಳು. ಕಂಪನಿ ಮಾಲಿಕಳೆನಿಸಿಕೊಂಡೆ, ಮುಂದೆ ಮಾಲಿಕಳೇ ಆಗಿಬಿಟ್ಟೆ. ಅದರಿಂದ ಕನ್ನಡ ರಂಗಭೂಮಿಯಲ್ಲಿ ನನಗೆ ಒಂದು ಶಾಶ್ವತ ಸ್ಥಾನವೇ ಸಿಕ್ಕಿಬಿಟ್ಟಿತು. ಸದಾ ಒಬ್ಬರಲ್ಲ, ಇನ್ನೊಬ್ಬ ಮಾಲಿಕರ ನೆರಳಲ್ಲೇ ಇದ್ದವಳು. ಬೆಳೆದು ಬಂದವಳು ನಾನು. ಕಾಲಚಕ್ರದ ಉರುಳಿನಲ್ಲಿ, ನನ್ನ ಕಾಲ ಮೇಲೆ ನಾನೂ ನಿಂತುದಲ್ಲದೆ ಹಲವಾರು ಕಲಾವಿದರಿಗೆ, ಸಿಬ್ಬಂದಿಗೆ ಹಲವಾರು ವರ್ಷಗಳವರೆಗೂ 'ಶ್ರೀ ಸ್ತ್ರೀ ನಾಟಕ ಮಂಡಲಿ' ಹೆಸರಿನಲ್ಲಿ ಆಸರೆ ನೀಡುವಂತಾಯಿತು! ಅದೇ ನನ್ನ ಪುಣ್ಯ, ಭಾಗ್ಯ. ಕಲೆಯ ಕ್ಷೇತ್ರದಲ್ಲಿ ಇನ್ನೂ ಮಿಗಿಲಾದುದನ್ನು ಕನಸು ಕಾಣಲು, ನನಸಾಗಿಸಿಕೊಳ್ಳಲು ಸಾಧ್ಯವೇ?

•

# ಸಿಲುಕಿದೆ, ನಲುಗಿದೆ ವಂಚಕರ ಜಾಲದಲಿ

ನಮ್ಮ ಗ್ರಹಚಾರ, ಹಣೆಬರಹ ಸರಿಯಿದ್ದರೆ ಎಲ್ಲವೂ ಸಲೀಸಾಗಿ - ಸುಲಲಿತವಾಗಿ ಸಾಗುತ್ತದೆ. ಇಲ್ಲವಾದರೆ ಕಾಲಿಟ್ಟಲ್ಲೆಲ್ಲಾ ತೊಡಕೇ, ಎಡವಟ್ಟೇ. ನಳನಳಿಸುವ ಹೂಬಳ್ಳಿ ಎಂದು ಎದೆಗಪ್ಪಿಕೊಂಡದ್ದು ಮುಳ್ಳಿನ ಮಾಲೆಯಷ್ಟೇ ಅಲ್ಲ, ಕಾಳೋರಗವೇ ಆಗಿ ಬಿಡುವ ಸಂಭವವೂ ಉಂಟು. ನಾನು ಕಂಪನಿ ಮಾಲಿಕಳೇನೆ ಆದೆ. ಆದರೆ ಮೊದಲೇ ವ್ಯವಹಾರಜ್ಞಾನ ಶೂನ್ಯಳು ನಾನು. ಹೀಗಾಗಿ ಅನೇಕ ವೇಳೆ ಮೋಸದ ಬಲೆಗೆ ಸಿಕ್ಕಿ ಕೊಳ್ಳಬೇಕಾಯಿತು. ಕಷ್ಟ - ನಷ್ಟ ಎದುರಿಸಬೇಕಾಯಿತು. ದುಡ್ಡು - ದುಗ್ಗಾಣಿ ಕಳೆದುಕೊಳ್ಳಬೇಕಾಯಿತು. ಆದರೂ ಅದು ಅನಿವಾರ್ಯ, ವಿಧಿ ನಿಯಮ ಎಂದು ಎಲ್ಲವನ್ನೂ ಸಾಕಷ್ಟು ಅನುಭವಿಸಿದೆ, ಸಹಿಸಿಕೊಂಡೆ. ಸ್ವಂತ ಕಂಪನಿ ಸ್ಥಾಪಿಸಿ ಬಂಡವಾಳ ಹೂಡಿ, ಬಾಡಿಗೆ- ಬಂಕ ತೆತ್ತು, ಬೇಕು ಬೇಕಾದ ಸಾಮಾನು- ಸರಂಜಾಮು ಒದಗಿಸಿಕೊಳ್ಳುವಷ್ಟು ಸಾಮರ್ಥ್ಯವಿರದಿದ್ದವಳು ನಾನು. ಹೀಗಾಗಿ ನಾಟಕಗಳನ್ನಾಡಿಸಲು ಕಂಟ್ರಾಕ್ಟರುಗಳ ಮೊರೆಹೋಗಬೇಕಾಯಿತು. ದಳ್ಳಾಳಿಗಳನ್ನು ಆಶ್ರಯಿಸಬೇಕಾಯಿತು. ವ್ಯವಹಾರದ ಸುಳಿವು - ಸೂಕ್ಷ್ಮ ತಿಳಿಯದೆ ಸಾಕಷ್ಟು ಕೈ ಸುಟ್ಟುಕೊಂಡೆ.

ನಾಟಕ - ಚಲನಚಿತ್ರರಂಗದ ಹೆಸರಾಂತ ನಗೆ ನಟ ಬಾಲಕೃಷ್ಣ ಒಮ್ಮೆ ನಮ್ಮ ಮನೆಗೆ ಬಂದಿಳಿದರು. ಜೊತೆಗೆ ಇನ್ನಿಬ್ಬರು ಹೊಸಬರು. "ನಾಗಮ್ಮ, ಇವರು ಶಿವಮೊಗ್ಗದವರು. ನನ್ನ ಪರಿಚಯದವರು. ನಾಟಕದ ಕಂಟ್ರಾಕ್ಟ್ ಮಾಡುತ್ತಾರೆ. ಅದರಲ್ಲೇ ನುರಿತವರು. ನಿನ್ನ ಕಂಪನಿಯದೂ ಒಂದಷ್ಟು ನಾಟಕ ಆಡಿಸಬೇಕೂಂತ ಬಂದಿದ್ದಾರೆ. ಅಗ್ರೀಮೆಂಟ್ ಮಾಡಿಕೋ, ನಿನಗೂ ಸಾಕಷ್ಟು ಹೆಸರು - ಹಣ ಬರುತ್ತೆ" ಎಂದರು ಬಾಲಣ್ಣ. ನನಗೋ ಹಿಂಜರಿಕೆ. "ಬಾಲಣ್ಣ, ನನಗ್ಯಾಕೆ ಈ ಎಲ್ಲ ಜವಾಬ್ದಾರಿ? ಹೇಗೋ ಆಗೊಂದಿಷ್ಟು - ಈಗೊಂದಿಷ್ಟು ನಾಟಕ ಮಾಡಿಕೊಂಡಿದ್ದೇನಲ್ಲ" ಎಂದೆ. "ಇಲ್ಲಮ್ಮ ನಾನೆಲ್ಲಾ ನೋಡಿಕೊಳ್ತೀನಿ. ಇದು ಒಳ್ಳೆ ವ್ಯವಹಾರ. ನೀನು ಸುಮ್ಮನೆ ಸೈನು ಹಾಕಮ್ಮ" ಎಂದು ಒತ್ತಾಯಿಸಿದರು. ಅವರ ಮಾತು ಮೀರಲು ಮನ ಬರಲಿಲ್ಲ. ನನಗೇನೋ ಇದು



ಹೊಸದಿರಬಹುದು. ಆದರೆ, ನೀರಿಗಿಳಿದ ಮೀನು ಈಜಾಡದೆ ಇರಲು, ಕೈ ಕಾಲಾಡಿಸದೆ ಇರಲು ಆಗುತ್ತದೆಯೇ? ನಾಟಕ ಆಡುವುದು ಎಂದಾದ ಮೇಲೆ ಇಂಥವಕ್ಕೆಲ್ಲ ಒಪ್ಪಲೇ ಬೇಕಲ್ಲ? ಸಹಿ ಹಾಕಿದೆ. ಸಾಂಕೇತಿಕ ಮುಂಗಡ ಮೊಬಲಗನ್ನೂ ಅವರು ಕೊಟ್ಟರು.

ನಾಟಕದ ಕ್ಯಾಂಪ್ ಹುಬ್ಬಳ್ಳಿಯಲ್ಲಿ ಹಾಕೋಣ ಎಂದು ಆ ಶಿವಮೊಗ್ಗದ ಮಂದಿ ನನಗೆ ತಿಳಿಸಿದರು. ಆ ವೇಳೆಗೆ ದೊರೆಸ್ವಾಮಿ ಹಲವು ಕಲಾವಿದರೊಂದಿಗೆ ಮೈಸೂರಿಗೆ ಹೋಗಿಬಿಟ್ಟಿದ್ದರು. 'ವಿಷಯ ಹೀಗಿದೆ. ಹುಬ್ಬಳ್ಳಿಗೆ ಹೋಗಬೇಕು. ಅಲ್ಲಿರುವ ಕಲಾವಿದರೊಡನೆ ಬೆಂಗಳೂರಿಗೆ ಬನ್ನಿ, ಎಲ್ಲರೂ ಇಲ್ಲಿಂದಲೇ ಹೊರಡೋಣ' ಎಂದು ಅವರಿಗೆ ಬರೆದು, ಸ್ವಲ್ಪ ದುಡ್ಡನ್ನೂ ಕಳಿಸಿಕೊಟ್ಟೆ. ಪ್ರಯಾಣದ ದಿನ ಬಂದೇ ಬಿಟ್ಟಿತು. ಆದರೆ ದೊರೆಸ್ವಾಮಿಯವರ ಸುಳಿವೇ ಇಲ್ಲ. ಅವರಿಗೆ ಏನು ಅನಾನುಕೂಲವೋ ಅಥವಾ ಅಸಮಾಧಾನವೋ ಗೊತ್ತಾಗಲಿಲ್ಲ. ಬಹಳ ಧಾವಂತದಿಂದಲೇ ರೈಲು ನಿಲ್ದಾಣಕ್ಕೆ ಹೊರಟು ನಿಂತೆ.

ರೈಲಿನ ಸಮಯಕ್ಕೆ ಸ್ವಲ್ಪ ಮುಂಚೆ ರುಕ್ಮಿಣಮ್ಮ, ಜಗದಾಂಬ, ಇನ್ನೊಂದಿಬ್ಬರು ನಟಿಯರು ಮಾತ್ರ ಬಂದಿಳಿದರು. ಅವರು ಮೈಸೂರು ನಿಲ್ದಾಣದಲ್ಲಿ ಕಾದಿದ್ದರಂತೆ. ಆದರೆ ದೊರೆಸ್ವಾಮಿಯವರು ಬರದೇ ಇದ್ದುದರಿಂದ 'ಹೇಗಾದರಾಗಲಿ, ಬೆಂಗಳೂರಿಗೆ ಹೋಗೋಣ. ಅಲ್ಲಿ ನಾಗಮ್ಮನವರಿಂದ ಚಾರ್ಜು ತೆಗೆದುಕೊಂಡರಾಯಿತು', ಎಂದು ತಾವೇ ದುಡ್ಡು ಹೊಂದಿಸಿ ಹಾಕಿಕೊಂಡು ಇಲ್ಲಿಗೆ ಬಂದಿದ್ದರು. ಅವರಾದರೂ ಬಂದರಲ್ಲ, ಸದ್ಯ ಎಂದುಕೊಂಡೆ. ತಮ್ಮನ್ನು ಹೇಳದೆ ಕೇಳದೆ ಈ ಕಾಂಟ್ರಾಕ್ಟಿಗೆ ಒಪ್ಪಿದ್ದರಿಂದ ದೊರೆಸ್ವಾಮಿಯವರಿಗೆ ಬೇಸರವಾಯಿತೇನೋ, ಅದಕ್ಕೇ ಬಂದಿಲ್ಲ ಎಂದುಕೊಂಡೆ. ಆದರೂ ಮುಂದಿಟ್ಟ ಹೆಜ್ಜೆ ಹಿಂತೆಗೆಯುವಂತಿಲ್ಲ, ಅದು ನನ್ನ ಜಾಯಮಾನವೂ ಅಲ್ಲ. ಬೇಜಾರನ್ನು ಬದಿಗಿಟ್ಟು ಬಂದವರೊಟ್ಟಿಗೆ ಹುಬ್ಬಳ್ಳಿ ಪ್ಲಾಟ್‌ಫಾರಂಗೆ ಬಂದಿಳಿದೆ.

ನಮ್ಮನ್ನು ಅಲ್ಲಿ ಎದುರುಗೊಂಡಿದ್ದು ನಿರಾಶೆಯ ಸರಮಾಲೆಯೇ ಹೊರತು ಗುತ್ತಿಗೆದಾರರ ಹೂಮಾಲೆಯಲ್ಲ. ಸಾಕಷ್ಟು ಕಾದು, ಕಾದು ಸುಸ್ತಾದ ಮೇಲೆ ಅವರ ಕಡೆಯವರೊಬ್ಬರು ಬಂದರು. ಒಂದು ಪುಟ್ಟ ಹೋಟೆಲ್‌ನಲ್ಲಿ ನಮ್ಮನ್ನು ಬಿಟ್ಟು, ಕೈಗೊಂದಿಷ್ಟು ಹಣ ಕೊಟ್ಟು ಹೊರಟು ಬಿಟ್ಟರು. ಶಿವಮೊಗ್ಗದ ಕಂಟ್ರಾಕ್ಟರುಗಳು, ನಾಟಕಕ್ಕಾಗಿ ಥಿಯೇಟರನ್ನೇ ಬುಕ್ ಮಾಡಿಲ್ಲ; ಅವರು ಗೊತ್ತು ಮಾಡಿದ್ದುದ್ದು ಒಂದು ಸಣ್ಣ ಹಾಲ್- ಊರಿಗೆ ದೂರ, ರೈಲ್ವೆ ಸ್ಟೇಷನ್ ಹತ್ತಿರ. ಏನೇನೂ ಚೆನ್ನಾಗಿಲ್ಲದ ಹಾಗೂ ನಾಟಕಗಳಿಗೆ ಏನೊಂದೂ ಸೂಕ್ತವಲ್ಲದ ಸ್ಥಳವದು. ಆದರೂ ಮರುದಿನದಿಂದ ನಾವು ನಾವೇ ಎಲ್ಲ ಏರ್ಪಾಟು ಮಾಡಿಕೊಂಡು ಎರಡು ನಾಟಕ ಆಡಿದೆವು. ಟಿಕೆಟ್ ಮಾರಿ ದುಡ್ಡೆಣಿಸಿಕೊಂಡುದಷ್ಟೇ ಕಂಟ್ರಾಕ್ಟರ್ ಕಡೆಯವರ ಡ್ಯೂಟಿ!

ಈ ಎರಡು ನಾಟಕಕ್ಕೇ ಅವರು ಮುಂಗಡ ಕೊಟ್ಟಿದ್ದ ಹಣ ಮುಗಿದು, ನಮ್ಮ ದುಡ್ಡೂ ಸ್ವಲ್ಪ ಕೈ ಬಿಟ್ಟಿತ್ತು. ಮೂರನೇ ಹಾಗೂ ಮುಂದಲ ಪ್ರದರ್ಶನಗಳ ಖರ್ಚಿಗೆ ಕೇಳಿದರೆ 'ಈಗ ಕೊಟ್ಟೇವು, ಆಗ ಕೊಟ್ಟೇವು' ಎಂದು ಸತಾಯಿಸತೊಡಗಿದರು. ಆಟದ ಆರಂಭದ ವೇಳೆ ಬಿಟ್ಟು ಉಳಿದಂತೆ ಕಣ್ತಪ್ಪಿಸತೊಡಗಿದರು. ನಮ್ಮ ಮಾನ, ಮರ್ಯಾದೆ ಪ್ರಶ್ನೆ ತಾನೇ? ಹಾಗೂ ಹೀಗೂ ಮಾಡಿ ಐದು ನಾಟಕ ಪೂರೈಸಿದೆವು. ಆ ಕಂಟ್ರಾಕ್ಟರುಗಳ ಸುಳಿವೇ ಇಲ್ಲ. ಅವರ ಭಂಟರು, ಏಜೆಂಟರಾದರೋ ಕಣ್ಣಾಮುಚ್ಚಾಲೆ ಆಡುತ್ತಿದ್ದಾರೆ. ನಾವೇ ಅವರನ್ನು ಹುಡುಕಿಕೊಂಡು ಅಲೆದಾಡಿದೆವು. ಅವರಿದ್ದ ನೆಲೆಯ ಸುಳಿವು ತಿಳಿದು ಅಲ್ಲಿಗೆ ಹೋದರೆ, ಅವರು ಜಾಗವನ್ನೇ ಖಾಲಿ ಮಾಡಿದ್ದಾರೆ. ನಮ್ಮ ಕೈಲೋ, ಪುಡಿಗಾಸು ಬಿಟ್ಟರೆ ಬೇರೇನೂ ಇಲ್ಲ. ಊರೂ ಹೊಸದು, ಜನರೂ ಹೊಸಬರು. ಇನ್ನು ಸಾಲ ತಾನೇ ಎಲ್ಲಿ ಹುಟ್ಟೀತು? ಒಟ್ಟಿನಲ್ಲಿ ನಾವು ಪೂರ್ತಿ ಮೋಸ ಹೋಗಿದ್ದೆವು, ಟೋಪಿ ಹಾಕಿಸಿಕೊಂಡಿದ್ದೆವು. ಅವರನ್ನು ನಂಬಿ, ನೆಚ್ಚಿ ಕೆಟ್ಟಿದ್ದೆವು. ತಲೆ ಮೇಲೆ ಕೈ ಹೊತ್ತು ಕುಳಿತ ನನಗೆ ಅಳುವೇ ಬಂದು ಬಿಟ್ಟಿತು. ಕಣ್ಣೀರ ಕಟ್ಟೆಯೊಡೆಯಿತು. ರಂಗದ ಮೇಲೆ ಆಟಾಟೋಪ, ಅಟ್ಟಹಾಸ ಮೆರೆಯುತ್ತಿದ್ದ ನಾನೀಗ ಅಳುವಿನ ಕಡಲಲ್ಲಿ! ನಾಟಕದ ನಟನೆಗೂ, ಜೀವನದ ನಡೆಗೂ ಎಷ್ಟೊಂದು ಅಂತರ!

ಸರಿ, ಇನ್ನು ಇಲ್ಲಿ ಇದ್ದು ಏನೂ ಪ್ರಯೋಜನವಿಲ್ಲ. ಬಿಡಾರ ಖಾಲಿ ಮಾಡಿ, ಊರು ಬಿಟ್ಟು ಹೊರಡೋಣ. ಪ್ರಯಾಣದ ಗಾಡಿ ಖರ್ಚಿಗೆ ಯಾರನ್ನಾದರೂ ಕಾಡಿ - ಬೇಡಿ ಸಾಲ ಮಾಡಿದರಾಯಿತು ಎಂದುಕೊಂಡೆವು. ಗಂಟುಮೂಟೆ ಕಟ್ಟತೊಡಗಿದೆವು. ಆಗ ಧುತ್ತೆಂದು ಮತ್ತೊಂದು ಆಪತ್ತು ತಲೆಯೆತ್ತಿತು. ನಾಟಕವಾಡುತ್ತಿದ್ದ ಹಾಲ್‌ನ ಒಡೆಯರು ಒಂದಿಬ್ಬರು ದಾಂಡಿಗರೊಡನೆ ದಡದಡನೆ ಬಂದಿಳಿದರು. 'ಹಾಲ್‌ನ ಬಾಡಿಗೆಯನ್ನೇ ಯಾರೂ ಚುಕ್ತಾ ಮಾಡಿಲ್ಲ. ಕೇವಲ ಸ್ವಲ್ಪ ಮುಂಗಡ ಕೊಟ್ಟಿದ್ದಷ್ಟೇ. ಹೀಗಿರುವಾಗ ಬಾಕಿ ತೀರಿಸದೇ ನೀವುಗಳು ಊರಿಗೆ ಹೊರಟುಬಿಟ್ಟರೆ ಹೇಗೆ? ನಮ್ಮ ದುಡ್ಡು ಬರುವ ತನಕ ನಿಮ್ಮ ಹಾರ್ಮೋನಿಯಂ, ಸಂಗೀತ ಉಪಕರಣಗಳು, ಮತ್ತಿತರ ಸಲಕರಣೆಗಳು ನಮ್ಮಲ್ಲೇ ಇರಲಿ' ಎನ್ನುತ್ತಾ ಅವನ್ನು ಕಿತ್ತಿಟ್ಟುಕೊಂಡುಬಿಟ್ಟರು. ನನಗೇಕೋ ಸಿಟ್ಟೇ ಬಂದುಬಿಟ್ಟಿತು. ಇದ್ದ ಬದ್ದ ಧೈರ್ಯವನ್ನೆಲ್ಲಾ ಒಟ್ಟು ಮಾಡಿ 'ನಾವೇಕೆ ಬಾಡಿಗೆ, ಬಾಕಿ ಇವೆಲ್ಲಾ ಕೊಡಬೇಕು? ಹಾಲ್ ಬುಕ್ ಮಾಡಿದ್ದು ನಾವಲ್ಲ, ಆ ಕಂಟ್ರಾಕ್ಟರುಗಳು. ಅವರನ್ನೇ ಹೋಗಿ ಕೇಳಿ, ವಸೂಲಿ ಮಾಡಿಕೊಳ್ಳಿ, ನಮಗೂ ಮೋಸಮಾಡಿ ಅವರು ಊರುಬಿಟ್ಟು ಪರಾರಿಯಾಗಿದ್ದಾರೆ' ಎಂದು ಒಂದು ಕಡ್ಡಿ ಎರಡು ತುಂಡು ಮಾಡಿದಂತೆ ಖಡಾ ಖಂಡಿತವಾಗಿ ಹೇಳಿಬಿಟ್ಟೆ. ಅವರಿಗೆ ಮರುಕವೇ ಹುಟ್ಟಿತೋ? ಇಲ್ಲಾ, ನಮ್ಮನ್ನು ಬಡಿದು ಚಚ್ಚಿದರೂ ಬಿಡಿಗಾಸೂ ಗಿಟ್ಟೋಲ್ಲ ಅಂತ ಗ್ಯಾರಂಟಿಯಾಯಿತೋ? ನಮ್ಮ ಹಾರ್ಮೋನಿಯಂ - ತಬಲಾದಿಗಳನ್ನು ಇಟ್ಟುಕೊಂಡು



ತಾವೇನು ಭಜನೆ ಕುಟ್ಟಬೇಕೋ, ಸೀನರಿ- ಪರದೆ ಇಟ್ಟುಕೊಂಡು ನಾಟಕ ಕಟ್ಟಬೇಕೊ ಎನಿಸಿತೇನೋ? ಎಲ್ಲವನ್ನೂ ಅಲ್ಲೇ ಬಿಟ್ಟು, ಆ ಕಂಟ್ರಾಕ್ಟರರ ಕುಟುಂಬ, ಕುಲಗೋತ್ರಗಳಿಗೆ ಹಿಡಿ ಶಾಪ ಹಾಕುತ್ತಾ ಹೊರಟು ಬಿಟ್ಟರು.

ಏನೋ, ಈ ಗಂಡಾಂತರವೂ ಕಳೆಯಿತು. ಮರ್ಯಾದೆಯಾಗಿ ಊರಿಗೆ ಮರಳಿ- ಮನೆ ಸೇರಿಕೊಳ್ಳೋಣ ಎಂದರೆ, ಪ್ರಯಾಣಕ್ಕೂ ಹಣವಿಲ್ಲ. ಅಲ್ಲೇ ಠಿಕಾಣಿ ಹಾಕೋಣವೆಂದರೆ ಅಂದಿನ ಊಟಕ್ಕೂ ಕಾಂಚಾಣವಿಲ್ಲ. ಯಾವುದಕ್ಕಾದರೂ ಹೊರಗೆ ಓಡಾಡಿ, ಬೇಡಬೇಕಾದ ದುಸ್ಥಿತಿ. ಸಾಲ ಹುಟ್ಟುವುದೂ ಅನುಮಾನ. ಯಾಕೋ ತುಂಬಾ - ತುಂಬಾ ಬೇಸರವಾಯಿತು. ಜೀವನದಲ್ಲೇ ಜಿಗುಪ್ಸೆ ಹುಟ್ಟಿತು. ಎಂಥ ಹೀನ -ದೀನ ಸ್ಥಿತಿಗೆ ತಲುಪಿಬಿಟ್ಟೆವಲ್ಲಾ, ಸಂಕಷ್ಟಕ್ಕೆ ಸಿಕ್ಕಿಬಿಟ್ಟೆವಲ್ಲಾ? ಸಂಕೋಚವನ್ನೂ ಬಿಟ್ಟೆವಲ್ಲಾ? ಎಂದು ಮನಸ್ಸಿಗೆ ಸಂಕಟವಾಯಿತು. ಗುಂಪಿನಿಂದ ದೂರವಾಗಿ, ಒಬ್ಬಂಟಿಯಾಗಿ ತಲೆ ಮೇಲೆ ಕೈಯಿಟ್ಟು ಕುಳಿತೆ. ಮುಂದೊಂದು ಮುರುಕು ಮಂಟಪ, ಮಧ್ಯದಲ್ಲೊಂದು ಮೋಟು ಮರ. ಅದರ ಕೆಳಗೆ ಬುದ್ಧನಂತೆ ನಾನು. ಗಲ್ಲಕ್ಕೆ ಕೈ ಹಚ್ಚಿ ಕಣ್ಮುಚ್ಚಿ ಧ್ಯಾನದ ಸ್ಥಿತಿಯಲ್ಲಿ! ಮರುಗಳಿಗೆಯೇ ಆ ಮೋಟು ಮರವೇ ನನ್ನ ಪಾಲಿಗೆ ಬೋಧಿವೃಕ್ಷವಾಗಬೇಕೆ! ಏನದೃಷ್ಟ? ಏನಚ್ಚರಿ? ಬುದ್ಧನಿಗೆ ಆದಂತೆ ನನಗೂ ಜ್ಞಾನೋದಯವಾಯಿತು. ಕತ್ತಲಲ್ಲಿದ್ದವಳಿಗೆ ಕೈ ದೀಪದ ಬೆಳಕು ದೊರೆತಂತಾಯ್ತು. ಕವಿದಿದ್ದ ಮಂಕು ದೂರಾಯಿತು. ಮರೆತು ಹೋಗಿದ್ದ ಮಾತೊಂದು ಅಮೃತವಾಣಿಯಂತೆ ಕಿವಿಯಲ್ಲಿ ಮೊರೆಯಿತು, ಮೊಳಗಿತು.

ನಾನು ಹುಬ್ಬಳ್ಳಿಗೆ ಹೊರಡುವ ಮುನ್ನ ಹೆಚ್.ಎಲ್.ಎನ್.ಸಿಂಹ ಅವರನ್ನು ಕಂಡಿದ್ದೆ. ಕಂಟ್ರಾಕ್ಟಿನ ವಿಚಾರ, ಹುಬ್ಬಳ್ಳಿಗೆ ಹೊರಟ ವಿಷಯ ತಿಳಿಸಿ ಅವರ ಆಶೀರ್ವಾದ ಬೇಡಿದ್ದೆ. ಕಂಪನಿ- ಕಂಟ್ರಾಕ್ಟ್ ವ್ಯವಹಾರಗಳಲ್ಲಿ ಅರಿತು ನುರಿತವರವರು. ಅಂದರೆ ಅವರೂ ಕೆಲವಾರು ಖದೀಮರ ಕುತಂತ್ರಕ್ಕೆ ಬಲಿಯಾಗಿ ಆಗಾಗ ಬೇಸ್ತು ಬಿದ್ದಿದ್ದವರು. ಕಷ್ಟ - ನಷ್ಟ ಕಂಡಿದ್ದರು, ಕಹಿ- ಸಿಹಿ ಉಂಡಿದ್ದರು. ಅವರಿಗೆ ಏನು ತೋಚಿತೋ, ಏನೋ? ''ನೋಡು, ಹುಬ್ಬಳ್ಳೀಲಿ ನನಗೆ ತುಂಬಾ ಬೇಕಾದ ಸ್ನೇಹಿತರೊಬ್ಬರಿದ್ದಾರೆ. ಡ್ಯಾನ್ಸ್ ಕುಲಕರ್ಣಿ ಅಂತ. ಭಾರಿ ಒಳ್ಳೇ ಮನುಷ್ಯ. ನಿನಗೇನಾದರೂ ಸಹಾಯ ಬೇಕಾದರೆ ಅವರನ್ನು ಕಾಣು. ನನ್ನ ಹೆಸರು ಹೇಳು. ನಾನೂ ಆದರೆ ಅವರಿಗೆ ಬರೆದಿರುತ್ತೇನೆ'' ಎಂದು ಹೇಳಿದ್ದರು. ಅವರ ವಿಳಾಸವನ್ನೂ ಕೊಟ್ಟಿದ್ದರು. 'ಈಕೆ ಅಮಾಯಕಳು. ಅನನುಭವಿ. ಏನಾದರೂ ತೊಡಕು- ತೊಂದರೇಲಿ ಸಿಕ್ಕಿ ಹಾಕಿಕೊಳ್ಳಬಹುದು. ಆಗ ಸಹಾಯಕ್ಕಿರಲಿ' ಎಂದೆನಿಸಿತ್ತೇನೋ ಅವರಿಗೆ. ಆ ಮಾತು - ಕತೆ ಇದೀಗ ನನ್ನ ನೆನಪಿಗೆ ಬಂತು. ಹೋದ ಜೀವ ಮರಳಿ ಬಂದಂತಾಯಿತು. ಹೊಳೆಯಲ್ಲಿ ಮುಳುಗುತ್ತಿದ್ದವನನ್ನು ದೋಣಿಯೊಂದು ತಾನೇ ಹುಡುಕಿಕೊಂಡು ಬಂದ ಹಾಗಾಯಿತು.

## ಆಪತ್ತಿಗೊದಗಿದ ಆಪ್ತಬಂಧು

ಕುಲಕರ್ಣಿಯವರ ವಿಳಾಸ ಹುಡುಕಿ ತೆಗೆದು ಅವರನ್ನು ಕಾಣಲೆಂದು ಹೊರಹೊರಡುತ್ತಿದ್ದೇನೆ. ಏನಾಶ್ಚರ್ಯ? ದೇವರೇ ಬಂದು ಎದುರು ನಿಂತ ಹಾಗೆ. ಕುಲಕರ್ಣಿಯವರೇ ನಮ್ಮ ಬಿಡಾರದ ಬಾಗಿಲ ಬಳಿ ಬಂದು ನನ್ನ ಮುಂದೆಯೇ ತಮ್ಮ ಪರಿಚಯ ಹೇಳಿಕೊಂಡರು. ಸಿಂಹರ ಕಾಗದ ಅವರಿಗೆ ತಲುಪಿತ್ತಂತೆ. ಅವರಿಗೆ ನಮ್ಮ ಅವಸ್ಥೆ, ಅವ್ಯವಸ್ಥೆಗಳೆಲ್ಲಾ ಗೊತ್ತಾಗಿತ್ತು. ಬೇರೇನೋ ಕೆಲಸದ ಒತ್ತಡದಿಂದ ಮುಂಚೆಯೇ ಬಂದು ಭೇಟಿಯಾಗಿರಲಿಲ್ಲವಂತೆ. ನಡುವೆ ಒಂದೆರಡು ದಿನ ಹೊರ ಊರಿಗೂ ಹೋಗಬೇಕಾಗಿತ್ತಂತೆ. ಅಲ್ಲದೆ ಪರಿಸ್ಥಿತಿ ಈ ಮಟ್ಟ ಮುಟ್ಟಿದೆ ಎಂಬುದರ ಸುಳಿವೂ ಇರಲಿಲ್ಲವಂತೆ. ''ನೀವೇನೂ ಯೋಚನೆ ಮಾಡಬೇಡಿ'' ಎಂದು ಧೈರ್ಯ ಹೇಳಿ ಹೊರಹೊರಟರು. ಅರ್ಧ ಘಂಟೆಯಲ್ಲೇ ಮರಳಿ ಬಂದರು. ಹಿಂದೆಯೇ ಅಡುಗೆ, ದಿನಸಿ ಸಾಮಾನುಗಳ ಚೀಲಗಳನ್ನು ಹೊತ್ತ ಆಳು. 'ಮೊದಲು, ಅಡುಗೆ - ಊಟವಾಗಲಿ' ಎಂದರು. ನಂತರ ನಮ್ಮೊಡನೆ ಕುಳಿತು ಎಲ್ಲ ವಿವರಗಳನ್ನೂ ಕೇಳಿ ತಿಳಿದರು. ಮುಂದಿನ ದಿನಗಳಲ್ಲಿ ಕುಲಕರ್ಣಿಯವರು ಮಾಡಿದ ಉಪಕಾರ, ನೀಡಿದ ಸಹಕಾರಗಳನ್ನು ನನ್ನ ಜೀವವಿರುವವರೆಗೆ ಮರೆಯುವ ಹಾಗಿಲ್ಲ. ಯಾವ ಜನ್ಮದ ಋಣಾನುಬಂಧವೋ? ಆಪತ್ಕಾಲಕ್ಕೆ ಆಪ್ತನಾಗಿ ಒದಗಿಬಂದ ಬಾಂಧವ, ಆತ. ದ್ರೌಪದಿಗೆ ಅಕ್ಷಯಪಾತ್ರೆ ಒದಗಿಸಿದ ಕೃಷ್ಣ ಪರಮಾತ್ಮನ ನೆನಪು ಥಟ್ಟನೆ ನನಗಾಯಿತು!

ಕುಲಕರ್ಣಿಯವರು ನಮ್ಮ ಅನ್ನ- ಆಶ್ರಯಗಳಿಗೆ ಅಚ್ಚುಕಟ್ಟಾದ ಏರ್ಪಾಡು ಮಾಡಿದ್ದಷ್ಟೇ ಅಲ್ಲ. ಕೊಪ್ಪಳ - ಬೆಳಗಾಂಗಳ ಕಡೆ ನಾವು ನಾಟಕ ಆಡಲೇಬೇಕೆಂದು ಒತ್ತಾಯ ಮಾಡಿ ಅಲ್ಲೆಲ್ಲಾ ಅಲೆದಾಡಿ ವ್ಯವಸ್ಥೆ ಮಾಡಿದರು. ಥಿಯೇಟರ್, ಬಿಡಾರದ ಮನೆ ಇವುಗಳನ್ನೆಲ್ಲಾ ತಾವೇ ಗೊತ್ತು ಮಾಡಿಕೊಂಡು ಬಂದರು. ನಮ್ಮ ನಾಟಕಗಳಿಗೆ ತಾವೇ ಕಂಟ್ರಾಕ್ಟರ್ ಆಗಿರಲೂ ಒಪ್ಪಿಕೊಂಡರು. ಪ್ರತಿನಾಟಕಕ್ಕೆ ಇನ್ನೂರೈವತ್ತು ರೂಪಾಯಿಗಳಂತೆ ಅವರು ನಮಗೆ ಕೊಡುವುದೆಂದು ಗೊತ್ತಾಯಿತು. ವಾಸ್ತವವೆಂದರೆ



ಅಂದಿನ ಪರಿಸ್ಥಿತಿಯಲ್ಲಿ ನಮಗೆ ಅವರು ಕೊಡಲು ಸಾಧ್ಯವಾಗುತ್ತಿದ್ದುದೂ ಅಷ್ಟೇ. ಆದರೆ ಈ ಹಣ ನಮಗೆ ಯಾವುದಕ್ಕೂ ಸಾಕಾಗುತ್ತಿರಲಿಲ್ಲ. ಇನ್ನೂರೈವತ್ತರಲ್ಲಿ ಉಡಿಗೆ- ತೊಡಿಗೆಗಳ ಬಾಡಿಗೆ, ಬೇರೆ ಖರ್ಚಿಗೆಂದೇ ಒಂದು ನೂರು ಕೈ ಬಿಡುತ್ತಿತ್ತು. ಉಳಿದಿದ್ದರಲ್ಲಿ ನಾಯಕ-ನಟಿ, ಎರಡನೇ ನಾಯಕಿ, ಸಾಮಾನ್ಯ ಪಾತ್ರಧಾರಿಣಿ- ಹೀಗೆ ದರ್ಜೆಗೆ ತಕ್ಕಂತೆ ತಲಾ ಇಪ್ಪತ್ತರಿಂದ ಹತ್ತು ರೂಪಾಯಿವರೆಗೆ ಹಂಚಿಹೋಗಿ ಬಿಡುತ್ತಿತ್ತು. ಎಲ್ಲಾ ಸಂದಾಯವಾದ ಮೇಲೆ ಬಹು ವೇಳೆ ನನಗೇ ಏನೂ ಉಳಿಯುತ್ತಿರಲಿಲ್ಲ. ಆದರೆ ನಾಟಕ ಆಡಿಸುತ್ತಿದ್ದುದೇ ನನಗೊಂದು ಗಳಿಕೆಯಾಗಿತ್ತು- ಹೆಗ್ಗಳಿಕೆಯಾಗಿತ್ತು, ಸಿರಿ- ಸಂತೋಷವಾಗಿತ್ತು. ನಾಟಕ ಇದ್ದಾಗ ಮಾತ್ರ ಈ ಮೊಬಲಗು. ಇಲ್ಲದ ದಿನ ಯಾರಿಗೂ ಸಂಬಳವಿಲ್ಲ. ಬರೀ ಉಂಬಳ ಅಷ್ಟೇ. ಯಾಕೆಂದರೆ ನಮ್ಮದಿನ್ನೂ ಖಾಯಂ ಕಂಪನಿಯಾಗಿ ರೂಪುಗೊಂಡಿರಲಿಲ್ಲ. ಅದರ ಯೋಚನೆ ಮಾಡುವಷ್ಟರ ಮಟ್ಟಿಗೂ ನಾವು ಬೆಳೆದಿರಲಿಲ್ಲ.

ಕುಲಕರ್ಣಿ ಮುಂದೆ ಗದಗ್‌ನಲ್ಲಿ ಕ್ಯಾಂಪ್ ಹಾಕಿದರು. ನಮ್ಮ ಕಂಪನಿಯಿಂದ 'ಕೃಷ್ಣಲೀಲೆ' ನಾಟಕ ಎಂದು ಜಾಹೀರು ಮಾಡಿಬಿಟ್ಟರು. ಸಾಲದೆಂಬಂತೆ ಪ್ರದರ್ಶನಕ್ಕೆ ಮುಖ್ಯ ಅತಿಥಿಗಳನ್ನಾಗಿ ಅಂದಿನ ಮುಖ್ಯ ಮಂತ್ರಿ ಬಿ.ಡಿ.ಜತ್ತಿಯವರನ್ನು ಆಹ್ವಾನಿಸಿಯೂ ಬಿಟ್ಟರು. ವಿಚಿತ್ರವೆಂದರೆ ನಮ್ಮ ತಂಡದಿಂದ ಎಂದೂ 'ಕೃಷ್ಣಲೀಲೆ' ಆಡಿದ್ದೇ ಇಲ್ಲ! ನಮ್ಮ ಪ್ರಮುಖ ನಾಟಕವೇನಿದ್ದರೂ 'ಕೃಷ್ಣಗಾರುಡಿ' ಮಾತ್ರ. ಕುಲಕರ್ಣಿಯವರಿಗೆ ನಮ್ಮ ಕಷ್ಟವನ್ನೆಲ್ಲಾ ನಿವೇದಿಸಿಕೊಂಡೆವು. ''ಕೃಷ್ಣಲೀಲೆಯ ಕಂಸನ ಪಾತ್ರಕ್ಕಂತೂ ನಮ್ಮಲ್ಲಿ ಸದ್ಯಕ್ಕೆ ಸೂಕ್ತ ನಟಿ ಇಲ್ಲ, ಮಾತು - ಹಾಡು ಯಾರಿಗೂ ಪಾಠವಾಗಿಲ್ಲ, ಅಲ್ಪ ಕಾಲಾವಕಾಶದಲ್ಲಿ ಕಂಠಗತ ಮಾಡಿಕೊಳ್ಳೋದಂತೂ ಕಷ್ಟ ಸಾಧ್ಯ''. ಅವರೋ, ಏನನ್ನು ಕೇಳಲೂ ಸಿದ್ಧವಿರಲಿಲ್ಲ. ನಾವು ಯಾವ ನಾಟಕವನ್ನಾದರೂ, ಎಷ್ಟೇ ಕಡಿಮೆ ಅವಧಿ ಯಲ್ಲಾದರೂ, ಅಭ್ಯಾಸ ಮಾಡಿ ಆಡಿಬಿಡಬಲ್ಲೆವು ಎಂಬ ನಮಗೇ ಇಲ್ಲದ ಧೈರ್ಯ, ದಿಟ್ಟತನ ಅವರಿಗೆ! ಯಾರು ಯಾವುದಕ್ಕೆ ಸೋಲದಿದ್ದರೂ, ಸ್ನೇಹ- ವಿಶ್ವಾಸಗಳಿಗೆ ತಲೆ ಬಾಗಲೇಬೇಕಲ್ಲ. ಆಗಲಿ ಎಂದು ಒಪ್ಪಿಕೊಂಡೆವು. ಅದನ್ನೇ ಒಂದು ಸವಾಲಿನಂತೆ ಸ್ವೀಕರಿಸಿದೆವು. ನಮ್ಮ ಸಾಮರ್ಥ್ಯವನ್ನೆಲ್ಲಾ ಪಣಕ್ಕಿಟ್ಟೆವು. ನಮ್ಮ ಶ್ರಮವನ್ನೆಲ್ಲಾ ಮುಡಿಪಿಟ್ಟೆವು. ಏನೆಲ್ಲಾ ಶ್ರದ್ಧೆ ವಹಿಸಿ ಮೂರು - ನಾಲ್ಕು ದಿನಗಳಲ್ಲೇ ತಯಾರಾಗಿ ಬಿಟ್ಟೆವು. ನನ್ನದೇ ಕಂಸನ ಪಾತ್ರ. ನಾಟಕವೂ ಪ್ರಾರಂಭವಾಯಿತು. ನನ್ನ ತಂಡದವರು ಆ ದಿನ ನನ್ನ ಮಾತನ್ನು, ಮಾನವನ್ನು ಉಳಿಸಿದರು. ಮಾನ್ಯತೆಯನ್ನೂ ಗಳಿಸಿಕೊಟ್ಟರು. ಗೌರವ ಅತಿಥಿಗಳಾಗಿದ್ದ ಬಿ.ಡಿ.ಜತ್ತಿ ದಂಪತಿಗಳು ನಾಟಕವನ್ನು ಮನಸಾರೆ ಮೆಚ್ಚಿಕೊಂಡರು. ನಮ್ಮಲ್ಲಿ ಒಬ್ಬೊಬ್ಬರನ್ನೂ ಕೊಂಡಾಡಿದರು, ಅಭಿನಂದಿಸಿದರು.

ಧಾರವಾಡದಲ್ಲಿ ಮುಂದಿನ ಕ್ಯಾಂಪ್. ಅಲ್ಲಿನ ಕಾಲೇಜು ಸಭಾಂಗಣದಲ್ಲಿ ಪ್ರದರ್ಶನ. ''ಇದು ನಗರ ಪ್ರದೇಶ. ಇಲ್ಲಿ ಪೌರಾಣಿಕಕ್ಕಿಂತ ಸಾಮಾಜಿಕ ನಾಟಕವೇ ಒಪ್ಪುತ್ತದೆ.

## ಆಪತ್ತಿಗೊದಗಿದ ಆಪ್ತಬಂಧು

ಕುಲಕರ್ಣಿಯವರ ವಿಳಾಸ ಹುಡುಕಿ ತೆಗೆದು ಅವರನ್ನು ಕಾಣಲೆಂದು ಹೊರಹೊರಡುತ್ತಿದ್ದೇನೆ. ಏನಾಶ್ಚರ್ಯ? ದೇವರೇ ಬಂದು ಎದುರು ನಿಂತ ಹಾಗೆ. ಕುಲಕರ್ಣಿಯವರೇ ನಮ್ಮ ಬಿಡಾರದ ಬಾಗಿಲ ಬಳಿ ಬಂದು ನನ್ನ ಮುಂದೆಯೇ ತಮ್ಮ ಪರಿಚಯ ಹೇಳಿಕೊಂಡರು. ಸಿಂಹರ ಕಾಗದ ಅವರಿಗೆ ತಲುಪಿತ್ತಂತೆ. ಅವರಿಗೆ ನಮ್ಮ ಅವಸ್ಥೆ, ಅವ್ಯವಸ್ಥೆಗಳೆಲ್ಲಾ ಗೊತ್ತಾಗಿತ್ತು. ಬೇರೇನೋ ಕೆಲಸದ ಒತ್ತಡದಿಂದ ಮುಂಚೆಯೇ ಬಂದು ಭೇಟಿಯಾಗಿರಲಿಲ್ಲವಂತೆ. ನಡುವೆ ಒಂದೆರಡು ದಿನ ಹೊರ ಊರಿಗೂ ಹೋಗಬೇಕಾಗಿತ್ತಂತೆ. ಅಲ್ಲದೆ ಪರಿಸ್ಥಿತಿ ಈ ಮಟ್ಟ ಮುಟ್ಟಿದೆ ಎಂಬುದರ ಸುಳಿವೂ ಇರಲಿಲ್ಲವಂತೆ. "ನೀವೇನೂ ಯೋಚನೆ ಮಾಡಬೇಡಿ" ಎಂದು ಧೈರ್ಯ ಹೇಳಿ ಹೊರಹೊರಟರು. ಅರ್ಧ ಘಂಟೆಯಲ್ಲೇ ಮರಳಿ ಬಂದರು. ಹಿಂದೆಯೇ ಅಡುಗೆ, ದಿನಸಿ ಸಾಮಾನುಗಳ ಚೀಲಗಳನ್ನು ಹೊತ್ತ ಆಳು. 'ಮೊದಲು, ಅಡುಗೆ - ಊಟವಾಗಲಿ' ಎಂದರು. ನಂತರ ನಮ್ಮೊಡನೆ ಕುಳಿತು ಎಲ್ಲ ವಿವರಗಳನ್ನೂ ಕೇಳಿ ತಿಳಿದರು. ಮುಂದಿನ ದಿನಗಳಲ್ಲಿ ಕುಲಕರ್ಣಿಯವರು ಮಾಡಿದ ಉಪಕಾರ, ನೀಡಿದ ಸಹಕಾರಗಳನ್ನು ನನ್ನ ಜೀವವಿರುವವರೆಗೆ ಮರೆಯುವ ಹಾಗಿಲ್ಲ. ಯಾವ ಜನ್ಮದ ಋಣಾನುಬಂಧವೋ? ಆಪತ್ಕಾಲಕ್ಕೆ ಆಪ್ತನಾಗಿ ಒದಗಿಬಂದ ಬಾಂಧವ, ಆತ. ದ್ರೌಪದಿಗೆ ಅಕ್ಷಯಪಾತ್ರೆ ಒದಗಿಸಿದ ಕೃಷ್ಣ ಪರಮಾತ್ಮನ ನೆನಪು ಥಟ್ಟನೆ ನನಗಾಯಿತು!

ಕುಲಕರ್ಣಿಯವರು ನಮ್ಮ ಅನ್ನ- ಆಶ್ರಯಗಳಿಗೆ ಅಚ್ಚುಕಟ್ಟಾದ ಏರ್ಪಾಡು ಮಾಡಿದ್ದಷ್ಟೇ ಅಲ್ಲ. ಕೊಪ್ಪಳ - ಬೆಳಗಾಂಗಳ ಕಡೆ ನಾವು ನಾಟಕ ಆಡಲೇಬೇಕೆಂದು ಒತ್ತಾಯ ಮಾಡಿ ಅಲ್ಲೆಲ್ಲಾ ಅಲೆದಾಡಿ ವ್ಯವಸ್ಥೆ ಮಾಡಿದರು. ಥಿಯೇಟರ್, ಬಿಡಾರದ ಮನೆ ಇವುಗಳನ್ನೆಲ್ಲಾ ತಾವೇ ಗೊತ್ತು ಮಾಡಿಕೊಂಡು ಬಂದರು. ನಮ್ಮ ನಾಟಕಗಳಿಗೆ ತಾವೇ ಕಂಟ್ರಾಕ್ಟರ್ ಆಗಿರಲೂ ಒಪ್ಪಿಕೊಂಡರು. ಪ್ರತಿನಾಟಕಕ್ಕೆ ಇನ್ನೂರೈವತ್ತು ರೂಪಾಯಿಗಳಂತೆ ಅವರು ನಮಗೆ ಕೊಡುವುದೆಂದು ಗೊತ್ತಾಯಿತು. ವಾಸ್ತವವೆಂದರೆ



ಅಂದಿನ ಪರಿಸ್ಥಿತಿಯಲ್ಲಿ ನಮಗೆ ಅವರು ಕೊಡಲು ಸಾಧ್ಯವಾಗುತ್ತಿದ್ದುದೂ ಅಷ್ಟೇ. ಆದರೆ ಈ ಹಣ ನಮಗೆ ಯಾವುದಕ್ಕೂ ಸಾಕಾಗುತ್ತಿರಲಿಲ್ಲ. ಇನ್ನೂರೈವತ್ತರಲ್ಲಿ ಉಡಿಗೆ- ತೊಡಿಗೆಗಳ ಬಾಡಿಗೆ, ಬೇರೆ ಖರ್ಚಿಗೆಂದೇ ಒಂದು ನೂರು ಕೈ ಬಿಡುತ್ತಿತ್ತು. ಉಳಿದಿದ್ದರಲ್ಲಿ ನಾಯಕ- ನಟಿ, ಎರಡನೇ ನಾಯಕಿ, ಸಾಮಾನ್ಯ ಪಾತ್ರಧಾರಿಣಿ- ಹೀಗೆ ದರ್ಜೆಗೆ ತಕ್ಕಂತೆ ತಲಾ ಇಪ್ಪತ್ತರಿಂದ ಹತ್ತು ರೂಪಾಯಿವರೆಗೆ ಹಂಚಿಹೋಗಿ ಬಿಡುತ್ತಿತ್ತು. ಎಲ್ಲಾ ಸಂದಾಯವಾದ ಮೇಲೆ ಬಹು ವೇಳೆ ನನಗೇ ಏನೂ ಉಳಿಯುತ್ತಿರಲಿಲ್ಲ. ಆದರೆ ನಾಟಕ ಆಡಿಸುತ್ತಿದ್ದುದೇ ನನಗೊಂದು ಗಳಿಕೆಯಾಗಿತ್ತು- ಹೆಗ್ಗಳಿಕೆಯಾಗಿತ್ತು, ಸಿರಿ- ಸಂತೋಷವಾಗಿತ್ತು. ನಾಟಕ ಇದ್ದಾಗ ಮಾತ್ರ ಈ ಮೊಬಲಗು. ಇಲ್ಲದ ದಿನ ಯಾರಿಗೂ ಸಂಬಳವಿಲ್ಲ. ಬರೀ ಉಂಬಳ ಅಷ್ಟೇ. ಯಾಕೆಂದರೆ ನಮ್ಮದಿನ್ನೂ ಖಾಯಂ ಕಂಪನಿಯಾಗಿ ರೂಪುಗೊಂಡಿರಲಿಲ್ಲ. ಅದರ ಯೋಚನೆ ಮಾಡುವಷ್ಟರ ಮಟ್ಟಿಗೂ ನಾವು ಬೆಳೆದಿರಲಿಲ್ಲ.

ಕುಲಕರ್ಣಿ ಮುಂದೆ ಗದಗ್‌ನಲ್ಲಿ ಕ್ಯಾಂಪ್ ಹಾಕಿದರು. ನಮ್ಮ ಕಂಪನಿಯಿಂದ 'ಕೃಷ್ಣಲೀಲೆ' ನಾಟಕ ಎಂದು ಜಾಹೀರು ಮಾಡಿಬಿಟ್ಟರು. ಸಾಲದೆಂಬಂತೆ ಪ್ರದರ್ಶನಕ್ಕೆ ಮುಖ್ಯ ಅತಿಥಿಗಳನ್ನಾಗಿ ಅಂದಿನ ಮುಖ್ಯ ಮಂತ್ರಿ ಬಿ.ಡಿ.ಜತ್ತಿಯವರನ್ನು ಆಹ್ವಾನಿಸಿಯೂ ಬಿಟ್ಟರು. ವಿಚಿತ್ರವೆಂದರೆ ನಮ್ಮ ತಂಡದಿಂದ ಎಂದೂ 'ಕೃಷ್ಣಲೀಲೆ' ಆಡಿದ್ದೇ ಇಲ್ಲ! ನಮ್ಮ ಪ್ರಮುಖ ನಾಟಕವೇನಿದ್ದರೂ 'ಕೃಷ್ಣಗಾರುಡಿ' ಮಾತ್ರ. ಕುಲಕರ್ಣಿಯವರಿಗೆ ನಮ್ಮ ಕಷ್ಟವನ್ನೆಲ್ಲಾ ನಿವೇದಿಸಿಕೊಂಡೆವು. "ಕೃಷ್ಣಲೀಲೆಯ ಕಂಸನ ಪಾತ್ರಕ್ಕಂತೂ ನಮ್ಮಲ್ಲಿ ಸದ್ಯಕ್ಕೆ ಸೂಕ್ತ ನಟ ಇಲ್ಲ, ಮಾತು - ಹಾಡು ಯಾರಿಗೂ ಪಾಠವಾಗಿಲ್ಲ, ಅಲ್ಪ ಕಾಲಾವಕಾಶದಲ್ಲಿ ಕಂಠಗತ ಮಾಡಿಕೊಳ್ಳೋದಂತೂ ಕಷ್ಟ ಸಾಧ್ಯ". ಅವರೋ, ಏನನ್ನು ಕೇಳಲೂ ಸಿದ್ಧವಿರಲಿಲ್ಲ. ನಾವು ಯಾವ ನಾಟಕವನ್ನಾದರೂ, ಎಷ್ಟೇ ಕಡಿಮೆ ಅವಧಿ ಯಲ್ಲಾದರೂ, ಅಭ್ಯಾಸ ಮಾಡಿ ಆಡಿಬಿಡಬಲ್ಲೆವು ಎಂಬ ನಮಗೇ ಇಲ್ಲದ ಧೈರ್ಯ, ದಿಟ್ಟತನ ಅವರಿಗೆ! ಯಾರು ಯಾವುದಕ್ಕೆ ಸೋಲದಿದ್ದರೂ, ಸ್ನೇಹ- ವಿಶ್ವಾಸಗಳಿಗೆ ತಲೆ ಬಾಗಲೇಬೇಕಲ್ಲ. ಆಗಲಿ ಎಂದು ಒಪ್ಪಿಕೊಂಡೆವು. ಅದನ್ನೇ ಒಂದು ಸವಾಲಿನಂತೆ ಸ್ವೀಕರಿಸಿದೆವು. ನಮ್ಮ ಸಾಮರ್ಥ್ಯವನ್ನೆಲ್ಲಾ ಪಣಕ್ಕಿಟ್ಟೆವು. ನಮ್ಮ ಶ್ರಮವನ್ನೆಲ್ಲಾ ಮುಡಿಪಿಟ್ಟೆವು. ಏನೆಲ್ಲಾ ಶ್ರದ್ಧೆ ವಹಿಸಿ ಮೂರು - ನಾಲ್ಕು ದಿನಗಳಲ್ಲೇ ತಯಾರಾಗಿ ಬಿಟ್ಟೆವು. ನನ್ನದೇ ಕಂಸನ ಪಾತ್ರ. ನಾಟಕವೂ ಪ್ರಾರಂಭವಾಯಿತು. ನನ್ನ ತಂಡದವರು ಆ ದಿನ ನನ್ನ ಮಾತನ್ನು, ಮಾನವನ್ನು ಉಳಿಸಿದರು. ಮಾನ್ಯತೆಯನ್ನೂ ಗಳಿಸಿಕೊಟ್ಟರು. ಗೌರವ ಅತಿಥಿಗಳಾಗಿದ್ದ ಬಿ.ಡಿ.ಜತ್ತಿ ದಂಪತಿಗಳು ನಾಟಕವನ್ನು ಮನಸಾರೆ ಮೆಚ್ಚಿಕೊಂಡರು. ನಮ್ಮಲ್ಲಿ ಒಬ್ಬೊಬ್ಬರನ್ನೂ ಕೊಂಡಾಡಿದರು, ಅಭಿನಂದಿಸಿದರು.

ಧಾರವಾಡದಲ್ಲಿ ಮುಂದಿನ ಕ್ಯಾಂಪ್. ಅಲ್ಲಿನ ಕಾಲೇಜು ಸಭಾಂಗಣದಲ್ಲಿ ಪ್ರದರ್ಶನ. "ಇದು ನಗರ ಪ್ರದೇಶ. ಇಲ್ಲಿ ಪೌರಾಣಿಕಕ್ಕಿಂತ ಸಾಮಾಜಿಕ ನಾಟಕವೇ ಒಪ್ಪುತ್ತದೆ.

ನೀವು ಸಿಂಹ ಅವರ 'ಸಂಸಾರ ನೌಕ' ವನ್ನೇ ಆಡಿ ಬಿಡಿ'' ಎಂದರು ಕುಲಕರ್ಣಿ. ನಮಗೂ ಒಂದು ಬದಲಾವಣೆ ಬೇಕಾಗಿತ್ತು. ಸರಿ, ಹೊಸ ಹುರುಪಿನಿಂದ ಅಭ್ಯಾಸಕ್ಕೆ ತೊಡಗಿದೆವು. ಎಲ್ಲರೂ ಮರೆತಿದ್ದ ಮಾತುಗಳನ್ನು ಮತ್ತೆ ಉರುಹೊಡೆದವು. ಎಂದೋ ಮಾಡಿದ್ದ ನಟನೆಯನ್ನು ಮತ್ತೆ ಮರುಕಳಿಸಿಕೊಂಡು ಮೂರು ದಿನದಲ್ಲಿಯೇ ತಯಾರಾದೆವು. ನನ್ನದು 'ಮಾಧು' ಪಾತ್ರ. ರಾಧ ಎಂಬ ಹುಡುಗಿ 'ಢಿಕ್ಕಿ' ಪಾತ್ರ ಮಾಡಿದಳು. ಆಕೆ ಒಳ್ಳೆ ಕಲಾವಿದೆ. ಮಿಗಿಲಾಗಿ ಬಲು ಧೈರ್ಯವಂತೆ. ಲೀಲಾಜಾಲವಾದ ನಟನೆ, ಸಲೀಸಾದ ಸಂಭಾಷಣಾ ಶೈಲಿ. ನಾಟಕದ ಸನ್ನಿವೇಶದಲ್ಲಿ ನಿಜವಾದ ಸಿಗರೇಟನ್ನೇ ಸೆಳೆಸೆಳೆದು ಸೇದಿ ಹೊಗೆಯನ್ನು ಸುರುಳಿ-ಸುರುಳಿಯಾಗಿ ಬಿಡುತ್ತಿದ್ದ ಛಾತಿವಂತೆ! ಆ ಭಾಗದ ಜನಪ್ರಿಯ ಜನನಾಯಕಿ, ಸಂಸತ್ಸದಸ್ಯೆ ಡಾ.ಸರೋಜಿನಿ ಮಹಿಷಿ ಆ ದಿನದ ನಾಟಕಕ್ಕೆ ಮುಖ್ಯ ಅತಿಥಿಗಳು. ಪ್ರದರ್ಶನ ಅವರ ಮನಗೆದ್ದಿತು. ತಮ್ಮ ಮೆಚ್ಚುಗೆಯನ್ನು ಮುಚ್ಚುಮರೆಯಿಲ್ಲದೆ, ಮುಕ್ತ ಮಾತುಗಳಲ್ಲಿ ವ್ಯಕ್ತ ಮಾಡಿ ನಮ್ಮನ್ನೆಲ್ಲಾ ಪ್ರೋತ್ಸಾಹಿಸಿದರು.

ಧಾರವಾಡದ ಕಡೆಯ ಜನಪ್ರಿಯ, ಪ್ರಸಿದ್ಧ ಪ್ರಚಲಿತ ಪತ್ರಿಕೆಗಳೆಂದರೆ ಸಂಯುಕ್ತ ಕರ್ನಾಟಕ ಮತ್ತು ಕರ್ಮವೀರ. ನಮ್ಮ ನಾಟಕಗಳಿಗೆ ಅವೆರಡೂ ತುಂಬಾ ಪ್ರಚಾರ, ಪ್ರೋತ್ಸಾಹ ನೀಡುತ್ತಿದ್ದವು. ನಾಟಕದ ಸಮಾಚಾರ, ನಮ್ಮ ಪರಿಚಯ, ಚಿತ್ರಗಳು, ವಿಮರ್ಶೆ ಎಲ್ಲವನ್ನೂ ವಿವರವಾಗಿ ಪ್ರಕಟಿಸಿ ನಾಗರಿಕರ ಕುತೂಹಲವನ್ನು ಕೆರಳಿಸುತ್ತಿದ್ದವು. ಸಾಮಾನ್ಯವಾಗಿ ನಾವು ನಾಟಕಕ್ಕೆಂದು ಊರುಬಿಟ್ಟು, ಬಂದು ಕ್ಯಾಂಪಿಗೆ ಸೇರಿಬಿಟ್ಟೆವೆಂದರೆ ನಮ್ಮ ನೆಂಟರಿಷ್ಟರಿಗೆ ಸಹಾ, ನಮ್ಮ ಯೋಗಕ್ಷೇಮಕ್ಕೆ ಕೂಡಾ, ಕಾಗದ ಬರೆಯುವ ಪರಿಪಾಟವಿರಲಿಲ್ಲ. ಅದಕ್ಕೆ ಪುರಸತ್ತೂ ಇರುತ್ತಿರಲಿಲ್ಲ. ಆದರೆ ಉತ್ತರ ಕರ್ನಾಟಕದ ಕ್ಯಾಂಪಿನಲ್ಲಿದ್ದ ನಮ್ಮ ಸಮಾಚಾರವೆಲ್ಲವೂ ನಮ್ಮ ಬಂಧು ಮಿತ್ರರಿಗೆ ಆ ಪತ್ರಿಕೆಗಳಲ್ಲಿನ ವಿವರವಾದ ವರದಿ, ವಿಷಯ, ವಿಮರ್ಶೆಗಳಿಂದ ವಿಶದವಾಗಿ ಗೊತ್ತಾಗುತ್ತಿತ್ತು. ಅಷ್ಟು ಸಮರ್ಪಕ- ಸಕಾಲಿಕವಾಗಿತ್ತು ಅವುಗಳ ಸಹಾಯ. ಅದಕ್ಕೂ ಕಾರಣ ಕುಲಕರ್ಣಿಯವರೇ. ಒಟ್ಟಿನಲ್ಲಿ ಕಾಣದ ದೇವರು ಕುಲಕರ್ಣಿಯವರ ರೂಪದಲ್ಲಿ ಕಣ್ಣಿಗೆ ಕಂಡು ಆ ಕಷ್ಟಕಾಲದಲ್ಲಿ ಕರುಣೆಯಿಂದ ಕಾಪಾಡಿದ. ನಮ್ಮ ಕಾರ್ಪಣ್ಯಗಳನ್ನು ಕಡೆಗಾಣಿಸಿದ. ಕ್ಯಾಂಪನ್ನು ಮರ್ಯಾದೆಯಾಗಿ ಮುಗಿಸಿಕೊಂಡು ಮರಳುವಂತೆ ಕೃಪೆಮಾಡಿದ. ಆ ಕಾರಣ -ಗುಣಕ್ಕಾಗಿಯೇ ಅಲ್ಲವೇ ಅವನನ್ನು 'ಕರುಣಾಕರ' ಎನ್ನುವುದು!

## ಹಾಡುಹಗಲೇ ಬಿದ್ದೆವು, ರಾತ್ರಿ ಕಂಡಿದ್ದ ಹೊಂಡಕ್ಕೆ

ಕಂಟ್ರಾಕ್ಟರರೆನ್ನುವ ಕಪಟಿಗಳ ಜಾಲದಲ್ಲಿ ಬಿದ್ದು ಸಾಕಷ್ಟೇ ಕಷ್ಟ ಪಟ್ಟಿದ್ದೆವು. ಕೋಟಲೆ ಅನುಭವಿಸಿದ್ದೆವು. ಪಾಠ ಕಲಿತಿದ್ದೆವು. ಆದರೂ ರಂಗಭೂಮಿಯ ರಂಗದಲ್ಲಿ ಉಳಿದುಕೊಳ್ಳಬೇಕೆಂದಿದ್ದರೆ ಅವರಿಗೆ ಮೊರೆಹೋಗುವುದೊಂದೇ ನಮಗಿದ್ದ ದಾರಿ. ಕಾರಣ ನಮಗಿದ್ದ ಸಂಪರ್ಕ-ಸಂಪನ್ಮೂಲಗಳ ಕೊರತೆ. ಹೀಗಾಗಿ ಇನ್ನೊಮ್ಮೆ ಆ ಕೂಪದಲ್ಲಿ ಸಿಲುಕಿಕೊಂಡೆವು. ಪಡಬಾರದ ಪಾಡುಪಟ್ಟೆವು.

ಮುಕುಂದಪ್ಪ ಎಂಬ ಗುತ್ತಿಗೆದಾರ ನಮಗೆ ಯಾರ ಮೂಲಕವೋ ಗಂಟು ಬಿದ್ದರು. ಏಳರಾಟದ ಶನಿ ವಕ್ಕರಿಸಿದ ಹಾಗೆ ಅಂಟಿಕೊಂಡರು. ಸಿರ್ಸಿಯಲ್ಲಿ ಹತ್ತು-ಹದಿನೈದು ನಾಟಕಗಳನ್ನಾಡಿಸಲೆಂದು ಮಾತುಕತೆ ನಡೆಸಿದರು. ಅಲ್ಲಿ ಒಳ್ಳೆ ದುಡ್ಡು ಮಾಡಬಹುದೆಂಬ ಆಸೆ ಮೂಡಿಸಿದರು. ಬೇರೆ ಬೇರೆ ಊರುಗಳಲ್ಲೂ ಸೇರಿಸಿ ನೂರಾರು ನಾಟಕಗಳನ್ನಾಡಿಸುವ ಭರವಸೆ ನೀಡಿದರು. ಅಂಗೈಲಿ ಅರಮನೆ ತೋರಿಸುವ ಚತುರತೆ ಅವರದು. ಆತನ ಮಾತುಗಾರಿಕೆ, ನಾಟಕೀಯ ನಯವಂತಿಕೆಗೆ ಮರುಳಾದೆ, ಮಾರುಹೋದೆ. ಅವರೇ ಹೇಳಿದಂತೆ ಬರೆಹದಲ್ಲಿ ಕರಾರೂ ಮಾಡಿಕೊಂಡೆ. ಆದರೂ ಮೋಸಹೋದೆ!

ಸಿರ್ಸಿಯಲ್ಲಿ ಐದು- ಆರು ನಾಟಕಗಳಾದವು. ಆತ ನಮ್ಮ ಕೈಗಿಟ್ಟಿದ್ದ ಮುಂಗಡ ಹಣ ಎಂದೋ ಕರಗಿಹೋಗಿತ್ತು. ಸಿರ್ಸಿಯಲ್ಲಿ ಕ್ಯಾಂಪು ಬಿಡುವ ದಿನವೂ ಹತ್ತಿರ ಬಂತು. ಒಪ್ಪಂದದಂತೆ ಹಣ ಸಂದಾಯವಾಗಲೇ ಇಲ್ಲ. ''ರಬಕವಿಯಲ್ಲಿ ನಾಟಕ ಶುರುಮಾಡಿ. ಅಲ್ಲಿ ಲೆಕ್ಕ ಚುಕ್ತಾ ಮಾಡಿಬಿಡುತ್ತೇನೆ. ಬಾಕಿ ಸ್ವಲ್ಪವೂ ಉಳಿಸಿಕೊಳ್ಳೋಲ್ಲ. ಸದ್ಯಕ್ಕೆ ಕೆಲ ತೊಂದರೆಗಳಿವೆ. ಸುಧಾರಿಸಿಕೊಳ್ಳಿ. ಅಲ್ಲಿಂದ ಮುಂದಿನ ನಾಟಕಗಳಿಗೆ ಬೇಕಾದರೆ ಅಡ್ವಾನ್ಸ್ ತೊಗೊಳ್ಳಿ ಮೇಡಂ'' ಎಂದು ಬೆಣ್ಣೆ ಮಾತಾಡಿದ. ನಮ್ಮನ್ನು ತೆಪ್ಪಗಾಗಿಸಿದ.

ರಬಕವಿಯಲ್ಲೂ ನಾಟಕಗಳು ಆರಂಭವಾದವು. ಐದಾಯಿತು, ಹತ್ತಾಯಿತು. ಕಲೆಕ್ಷನ್‌ಗೆ ಏನೂ ಕಡಿಮೆಯಿಲ್ಲ. ಮುಕುಂದಪ್ಪ ಮಾತ್ರ ಕಾಸೇ ಕೊಡವಲ್ಲ. ಕಲಾಬಳಗದವರ ಸಂಬಳ, ಉಂಬಳ ತಪ್ಪಿಸಲಾರೆನಲ್ಲ? ಅದಕ್ಕೆಂದು ಸಾಲ - ಸೋಲಗಳ ಶೂಲಕ್ಕೆ ಸಿಲುಕಿಕೊಂಡೆ.

ಸಂಕಟದ ಸಂಕೋಲೆಗೆ ಒಡ್ಡಿಕೊಂಡೆ. ನಾಟಕ ನಿಲ್ಲಿಸಿಬಿಟ್ಟರೆ ಎಲ್ಲಿ ಕಂಪನಿಗೇ ಕೆಟ್ಟ ಹೆಸರು ಬಂದು ಬಿಡುತ್ತದೆಯೋ ಎಂದು ಹಾಗೂ ಹೀಗೂ ಮುಂದುವರಿಸಿದ್ದೆ. ರಬಕವಿಯಲ್ಲಿ ನಮ್ಮ ಬಿಡಾರಕ್ಕೆಂದು ಮುಕುಂದಪ್ಪ ಬಿಡಿಸಿಕೊಟ್ಟಿದ್ದ ಮನೆಯ ಸ್ಥಿತಿಗತಿಯೋ, ದೇವರಿಗೇ ಅಲ್ಲಲ್ಲ.... ದೆವ್ವಗಳಿಗೇ ಪ್ರೀತಿ! ಅದರ ವರ್ಣನೆಗೆ, ಅಲ್ಲಿ ನಾವು ಪಟ್ಟ ಅವಸ್ಥೆಗಳ ಬಣ್ಣನೆಗೆ ಬೇರೊಂದೇ ಅಧ್ಯಾಯಬೇಕು. ಆ 'ಭೂತ ಬಂಗಲೆ' 'ದೆಯ್ಯದ ನೆಲೆ'ಯಲ್ಲಿ ನಾವು ದಿನ ದೂಡಿದ್ದೇ ಒಂದು ದೊಡ್ಡ ಸಾಹಸದ ಕಥೆ. ಆದರೂ ಉಸಿರು ಬಿಗಿಹಿಡಿದು ಅಲ್ಲಿಯೇ ದಿನ ದೂಡುತ್ತಿದ್ದೆವು.

ಈ ಮಧ್ಯೆ ನಮಗೊಂದು ಕೆಟ್ಟ ಸುದ್ದಿ ಬಂತು, ಬೆಂಗಳೂರಿನಿಂದ. ನನ್ನ ರಂಗ ಗುರುಗಳೂ ಉತ್ತುಂಗ ಕಲಾವಿದರೂ, ಆದರ್ಶವಾದಿ ಕಂಪನಿ ಮಾಲೀಕರೂ ಆಗಿದ್ದ ಸುಬ್ಬಯ್ಯನಾಯ್ಡು ನಿಧನರಾಗಿದ್ದರು. ಸಹಸ್ರಗಟ್ಟಲೆ ಕಲಾರಸಿಕರನ್ನು ಅಗಲಿ ಹೋಗಿದ್ದರು. ಅದರ ಬೆನ್ನ ಹಿಂದೆಯೇ ಮತ್ತೊಂದು ಆಘಾತದ ದುರ್ವಾರ್ತೆ! ನಾಯ್ಡು ಕಣ್ಮುಚ್ಚಿದ ಕೆಲಘಂಟೆಗಳಲ್ಲೇ ಅವರ ಹೆಂಡತಿಯೂ ಕೊನೆಯುಸಿರೆಳೆದಿದ್ದರು. ಪತಿಯನ್ನು ಅಕ್ಷರಶಃ ಅನುಸರಿಸಿ ಸಹಗಮನ ಮಾಡಿದ್ದರು, ಆ ಸಹಧರ್ಮಿಣಿ.

ನಾನು ಕಲಾರಂಗದಲ್ಲಿ ನೆಲೆಯೂರಲೂ, ತಲೆ ಎತ್ತಿ ನಿಲ್ಲಲೂ, ಕಲೆಯನ್ನು ಬದುಕಿಗೆ ಆಧಾರವಾಗಿಸಿಕೊಳ್ಳಲೂ ದಾರಿ ತೋರಿ ಉಪಕರಿಸಿದ್ದ ಉದಾರಿ, ಪುಣ್ಯಾತ್ಮ ನಾಯ್ಡು. ಅವರ ಅಂತಿಮ ದರ್ಶನ ಪಡೆದು ಪುನೀತಳಾಗಿ ಬರೋಣವೆಂದು ಅದೆಷ್ಟೋ ಹಂಬಲಿಸಿದೆ. ನನ್ನ ಸ್ಥಿತಿಯೋ ಚಿಂತಾಜನಕವಾಗಿತ್ತು. ಪ್ರಯಾಣಕ್ಕೂ ಹಣದ ಅಡಚಣೆ. ಜೊತೆಗಿದ್ದವರು ದಿನ ದೂಡಲೂ ದುಡ್ಡಿನ ಕೊರತೆ.

ನಾನೇನಾದರೂ ಈ ಕಡೆ ಹೊರಟುಬಿಟ್ಟರೆ ಆ ಮುಕುಂದಪ್ಪ ಕೈ ಕೊಟ್ಟು ಪರಾರಿಯಾಗಿ ಬಿಟ್ಟರೇನು ಗತಿ ಎಂಬ ಭೀತಿ. ನನ್ನ ಎಲ್ಲ ಪ್ರಯತ್ನವೂ ವಿಫಲವಾಯಿತು. ನಾನು ಬೆಂಗಳೂರಿಗೆ ಹೋಗುವ ಆಸೆ ಕೈ ಬಿಟ್ಟು ಕೈ ಚೆಲ್ಲಿ ಕೂತೆ. ನನಗೊಂದೇ ಚಿಂತೆ: ನನ್ನ ಏಳಿಗೆಗೆ ಕಾರಣರೂ, ಬಾಳಿಗೆ ದೀವಿಗೆಯೂ ಆಗಿದ್ದವರಿಗೆ ಅಂತಿಮ ಪ್ರಣಾಮ ಸಲ್ಲಿಸಲೂ ಆಗುತ್ತಿಲ್ಲವಲ್ಲ ಎಂದು. ಮಮ್ಮಲ ಮರುಗಿದೆ, ಕೊರಗಿದೆ. ಅಲ್ಲಿಂದಲೇ ಅವರ ಆತ್ಮಕ್ಕೆ ಶಾಂತಿ ಕೋರಿದೆ.

'ವ್ರತ ಕೆಟ್ಟರೂ ಸುಖ ಸಿಗಲಿಲ್ಲ' ಎಂದಾಯಿತು, ನನ್ನ ಸ್ಥಿತಿ. ಅತ್ತ ಬೆಂಗಳೂರಿಗೂ ಹೋಗಲಿಲ್ಲ. ಇತ್ತ ಮುಕುಂದಪ್ಪನ ಹತ್ತಿರ ಹಣ ವಸೂಲಿಯೂ ಆಗಲಿಲ್ಲ. ಆ ಮನೆ, ಊರು, ನಾಟಕಗಳು, ಮುಕುಂದಪ್ಪ ಎಲ್ಲದರ ಬಗ್ಗೆಯೂ ನನಗೆ ಜಿಗುಪ್ಸೆ ಹುಟ್ಟಿಬಿಟ್ಟಿತು. ಎಲ್ಲವನ್ನೂ ಬಿಟ್ಟು ಎಲ್ಲಿಯಾದರೂ ಓಡಿಹೋಗಿ ಬಿಡಲೇ? ವಿಷವೋ, ಪಾಷಾಣವೋ



ತೊಗೊಂಡು ಬಿಡಲೇ? ಎನಿಸಿಬಿಟ್ಟಿತ್ತು. ಒಡನೆಯೇ ನನ್ನನ್ನೇ ನಂಬಿ- ನೆಚ್ಚಿ, ಮನೆ, ಮನೆಯವರನ್ನೆಲ್ಲಾ ಬಿಟ್ಟು ನನ್ನೊಡನೆ ಬಂದಿದ್ದ ಹುಡುಗಿ- ಹೆಂಗಳೆಯರ ನೆನಪು ಕಾಡುತ್ತಿತ್ತು. ಹೀಗಾಗಿ ಓಡಿಹೋಗುವ ಯೋಚನೆಯನ್ನೇ ಕೈ ಬಿಡುತ್ತಿದ್ದೆ.

ಏಕಾದಶಿಯ ದಿನ ಶಿವರಾತ್ರಿಯೂ ಬಂದಂತಾಯಿತು, ಮೈಸೂರಿನಿಂದ ನನಗೆ ಬಂದ ಪತ್ರ ನೋಡಿದಾಗ. ನನ್ನ ಮಗ ಅಲ್ಲಿ ನಮ್ಮತ್ತೆಯ ಮನೆಯಲ್ಲೇ ಓದಿಕೊಂಡಿದ್ದವನು, ಶಾಲೆಯ ಮೈದಾನದಲ್ಲಿ ಏನೋ ಆಟವಾಡುತ್ತಿರುವಾಗ ಮೇಲಿಂದ ಬಿದ್ದು ಕಾಲಿಗೆ ಪೆಟ್ಟು ಮಾಡಿಕೊಂಡಿದ್ದನಂತೆ. 'ಮೂಳೆಮುರಿತಕ್ಕೆ ಚಿಕಿತ್ಸೆ - ಆರೈಕೆಯೇನೋ ನಡೆಯುತ್ತಿದೆ. ಆದರೆ ನಿನ್ನನ್ನು ನೋಡಲು ಹಂಬಲಿಸುತ್ತಿದ್ದಾನೆ. ಒಂದೆರಡು ದಿನದ ಮಟ್ಟಿಗಾದರೂ ಬಿಡುವು ಮಾಡಿಕೊಂಡು ಬಂದು ಕೂಡಲೇ ನೋಡಿಹೋಗು. ಅವನ ಮನಸ್ಸಿಗೆ ಸಮಾಧಾನ, ಸಂತೋಷವಾಗಿ ಚೇತರಿಕೆಯೂ ಬೇಗ ಆದೀತು', ಎಂದೆಲ್ಲಾ ಬರೆದಿದ್ದಾರೆ. ನನಗೋ ಅಡಕತ್ತರಿಯಲ್ಲಿ ಸಿಕ್ಕಿಹಾಕಿಕೊಂಡಂತಾಯಿತು. ಮಗನ ಮೇಲೆ ಮಮತೆ, ನೋಡಹೋಗಲೂ ಆಗದ ಅಸಹಾಯಕತೆ. ನನ್ನದು ಸದಾ ಇದೇ ಕತೆಯಾಯಿತಲ್ಲ? ಎಂದು ವ್ಯಥೆಯಾಯಿತು. 'ಇಲ್ಲಿ ಮಗು ಕಾಲು ಮುರಿದುಕೊಂಡು ನರಳುತ್ತಾ ಬಿದ್ದಿದೆ. ಅವರಮ್ಮ ಮಾತ್ರ ನಾಟಕವನ್ನೇ ಬಿಟ್ಟು ಬರಲಲ್ಲಾ? ಇದು ಯಾಕೋ ಅತಿಯಾಯಿತು' ಎಂದುಕೊಂಡರೇನೋ ನನ್ನ ನೆಂಟರಿಷ್ಟರು. ನನ್ನ ಸ್ಥಿತಿ ಅವರೆಲ್ಲರ ಊಹೆಗೂ ನಿಲುಕದಷ್ಟು ಶೋಚನೀಯವಾಗಿತ್ತು. ನನ್ನಷ್ಟಕ್ಕೆ ನಾನೇ ಮೂಕಸಂಕಟದಿಂದ ನರಳಿದೆ.

ಮುಕುಂದಪ್ಪನ ಕಪಟ, ಮೋಸ ನನ್ನೊಬ್ಬಳನ್ನು ಬಿಟ್ಟು ಉಳಿದವರಿಗೆಲ್ಲಾ ಪೂರ್ತಿ ಅರ್ಥವಾಗಿತ್ತು. ನಮ್ಮ ನಾಟಕದ ಹುಡುಗಿಯರೇನೋ 'ನೀವೇಕೆ ಅವನ ನಾಟಕ ನಂಬುತ್ತೀರಿ ಮೇಡಂ? ದುಡ್ಡು ಕೊಟ್ಟರೆ ಮಾತ್ರ ಮುಂದಿನ ನಾಟಕ ಎಂದು ಕಟ್ಟುನಿಟ್ಟಾಗಿ ಹೇಳಿ. ಇಲ್ಲದಿದ್ದರೆ ನಾಟಕ ನಿಲ್ಲಿಸಿಬಿಡಿ' ಎನ್ನುತ್ತಿದ್ದರು. ಊರಲ್ಲಿ ಎಲ್ಲೆಲ್ಲಿ ಹೋದರೂ ನನಗೆ ಇದೇ ಹಿತೋಪದೇಶ ಸಿಗುತ್ತಿತ್ತು. ಆದರೆ ನಾನು ಪಾಠ ಕಲಿಯಲಿಲ್ಲ. ಕಟು ನಿರ್ಧಾರ ಕೈಗೊಳ್ಳಲಾಗದೆ, ನಿಷ್ಠುರ ನುಡಿ ನುಡಿಯಲಾಗದೆ ಹೋದೆ. ಹಗಲು ಕಂಡ ಬಾವಿಗೆ ರಾತ್ರಿ ಹುಡುಕಿ, ಹುಡುಕಿಕೊಂಡು ಹೋಗಿ ಬಿದ್ದಿದ್ದೆ!

ನನ್ನ ಸಾಲ ಹನುಮಂತನ ಬಾಲದಂತೆ ಬೆಳೆಯಿತು. ಸಾಲ ಕೊಟ್ಟವರ ಕಾಟವೂ ಕಟುವಾಯಿತು. ಮುಕುಂದಪ್ಪನ ಬಳಿ ಹೋಗಿ ಕೂಗಾಡಿದೆ, ರೇಗಾಡಿದೆ. ನನ್ನ ಅವಸ್ಥೆ ಹೇಳಿಕೊಂಡು ಅತ್ತೆ, ಅಲವತ್ತು ಕೊಂಡೆ. ಆತ ಏನೇನೋ ತಂಟೆ- ತರಲೆ- ತಗಲೂಪಿ ಮಾಡಿಕೊಂಡಿದ್ದ. ಒಂದು ಗಳಿಗೆ ಏನೂ ತೋಚದೆ ಬೆಪ್ಪು ಬೆಪ್ಪಾದ. ಮರುಗಳಿಗೆಯೇ ಅವನಿಗೇನು ಹೊಳೆಯಿತೋ? ಒಳಗೆ ಹೋಗಿ ಒಂದು ಸ್ಟ್ಯಾಂಪ್ ಪೇಪರನ್ನು ತಂದ. ನನ್ನ ಮುಂದಿಟ್ಟ. "ನಾಗರತ್ನಮ್ಮನವರೇ, ನಿಮಗೆ ಕೊಡಬೇಕಾದ ಬಾಕಿಗಾಗಿ ಈ ಪತ್ರ

ಬರೆದುಕೊಡುತ್ತೇನೆ. ನಿಮಗಿನ್ನೇನು ಗ್ಯಾರಂಟಿ ಬೇಕು? ಸದ್ಯಕ್ಕೆ ನೀವು ನನ್ನನ್ನು ಹಿಡಿದು ಹೊಡೆದರೂ, ಸದೆಬಡಿದರೂ ನನ್ನ ಹತ್ತಿನ ಬಿಡಿಗಾಸೂ ಹುಟ್ಟೋಹಾಗಿಲ್ಲ" ಎಂದುಬಿಟ್ಟ. ಇಷ್ಟಿಷ್ಟು ನಾಟಕಗಳನ್ನು ಆಡಿಸಿದ್ದೇನೆ. ಇಷ್ಟೊಂದು ಹಣ ಬಾಕಿಯಿದೆ ಎಂದು ಕೂಡಿ-ಕಳೆದು, ಗುಣಾಕಾರ-ಭಾಗಾಕಾರ ಮಾಡಿ ಲೆಕ್ಕ ಹಾಕಿದ. ಅದೇನೋ ಒಕ್ಕಣೆ ಬರೆಸಿ, ಸಹಿ ಮಾಡಿ ತಮ್ಮ ಪೈಕಿಯವರೇ ಇಬ್ಬರ ಸಾಕ್ಷಿಯನ್ನೂ ಹಾಕಿಸಿದ. ಸುತ್ತಮುತ್ತಲಿದ್ದವರು ನನಗೊಂದಿಷ್ಟು ಸಮಾಧಾನ- ಸಮಜಾಯಿಷಿ ಹೇಳಿದರು. ಅವನ ಪರವಾಗಿ ವಕೀಲಿ, ವಶೀಲಿ ನಡೆಸಿದರು. ನನ್ನ ಪರವಾಗಿ, ನ್ಯಾಯದ ಪರವಾಗಿ ಮಾತಾಡುವವರೇ ಇಲ್ಲ! ಸ್ಟಾಂಪ್ ಪೇಪರನ್ನು ನನ್ನ ಕೈಗಿಟ್ಟು, ಕೈ ಮುಗಿದು ಬಿಟ್ಟ. ಅರ್ಥಾತ್ ಕೈ ಕೊಟ್ಟ!!

ಈಗಾಗಲೇ ಸಾಲ ಕೊಟ್ಟಿದ್ದವರ ಕೈ ಕಾಲು ಕಟ್ಟಿ, ಇನ್ನಷ್ಟು ಸಾಲ ಮಾಡಿದೆ. ಒಂದಷ್ಟು ಸಾಮಾನು, ಸರಂಜಾಮು ಮಾರಿದೆ. ಅಂಗಡಿ -ಮುಂಗಟ್ಟಿನವರ ಬಾಕಿ ತೀರಿಸಿದೆ. ಆದರೆ ಕಲಾವಿದರು-ಕೆಲಸಗಾರರ ಸಂಬಳದ ಬಾಬ್ತು ಮಾತ್ರ ಬಾಕಿ ಉಳಿಸಿಕೊಂಡಿದ್ದೆ. ರಬಕವಿಯ ಮೊಕ್ಕಾಂ ಮುಕ್ತಾಯ ಮಾಡಿ, ಹಾಗೂ- ಹೀಗೂ ಮಾನಮರ್ಯಾದೆ ಉಳಿಸಿಕೊಂಡು ಮೈಸೂರಿಗೆ ಬಂದೆ. ಮಗನೇನೋ ಸಾಕಷ್ಟು ಗುಣಮುಖನಾಗಿದ್ದ. ಆದರೂ ಅವನ ಮುಖ ನೋಡಿದೊಡನೆಯೇ ನನಗೆ ಅಳುವೇ ಬಂದುಬಿಟ್ಟಿತು. ಅವನನ್ನು ಎದೆಗಪ್ಪಿಕೊಂಡು ಹಲವು ಘಂಟೆಗಳನ್ನೇ ಕಳೆದೆ. ಬಂಧು- ಬಾಂಧವರಿಂದ ನನಗೆ ಬೈಗಳ ಸುರಿಮಳೆಯೇ ಆಯಿತು.

ವ್ಯವಹಾರ ಜ್ಞಾನವೆಂಬುದು ನನ್ನ ಜಾತಕ- ಜಾಯಮಾನಗಳಿಗೇ ಬಂದುದಲ್ಲ. ಮುಕುಂದಪ್ಪ ಬರೆದುಕೊಟ್ಟಿದ್ದ ಸ್ಟಾಂಪ್ ಪೇಪರನ್ನು ಬಹಳ ಉಮೇದಿನಿಂದ ಒಬ್ಬ ಲಾಯರ ಬಳಿ ಒಯ್ದೆ. ಒಕ್ಕಣೆಯನ್ನು ವಿವರವಾಗಿ, ನಿಧಾನವಾಗಿ ಓದಿದರು ಅವರು. ನಂತರ ಪತ್ರವನ್ನು ಪಕ್ಕಕ್ಕೆಸೆದರು. "ನೀವೇನೋ ದೊಡ್ಡ ನಾಟಕಕಾರರು, ನಟ ಇರಬಹುದು. ಆದರೆ ಈ ಪತ್ರ ಬರೆದುಕೊಟ್ಟರೋನು ನಿಮ್ಮನ್ನೆಲ್ಲ ಮೀರಿಸಬಲ್ಲ ನಟ- ರಾಜ! ಅದರಲ್ಲಿ ಏನೊಂದೂ ತಿರುಳಿಲ್ಲ. ಹುರುಳಿಲ್ಲ. ಕರಾರಿನ ಶರತ್ತುಗಳೊಂದೂ ಕೋರ್ಟಿನಲ್ಲಿ ಊರ್ಜಿತವಾಗತಕ್ಕದ್ದಲ್ಲ. ಸಾಕ್ಷಿಗಳೂ ಅವನ ಕಡೆಯವರೇ. ಈ ಪತ್ರಾನ ಉಪ್ಪು- ಕಾರ ಹಾಕಿ ನೆಕ್ಕಬೇಕಷ್ಟೇ. ಮುಕುಂದಪ್ಪನನ್ನು ಸಿಕ್ಕಿಸಿ ಬಾಕಿ ವಸೂಲಿ ಮಾಡಲಿಕ್ಕೆ ಅಂತ ಹೋದರೆ, ಕೇಸು ತಿರುವು-ಮುರುವು ಆಗಿ ನೀವೇ ತೊಂದರೇಲಿ ಸಿಕ್ಕಿಕೊಂಡರೂ ಆಶ್ಚರ್ಯವಿಲ್ಲ. ಪತ್ರ ಬರೆಸಿಕೊಳ್ಳುವಾಗ ಯಾರಾದರೂ ತಿಳಿದವರನ್ನೋ, ಲಾಯರನ್ನೋ, ಕೇಳಬಾರದಾಗಿತ್ತೆ? ಒಟ್ಟಿನಲ್ಲಿ ಭಾರಿಯಾಗಿಯೇ ಮೋಸಹೋಗಿದ್ದೀರಿ. ಈಗಂತೂ ನಿಮಗೆ ಯಾರೂ ಸಹಾಯ ಮಾಡುವಂತಿಲ್ಲ" ಎಂದು ಹೇಳಿ ಕೈ ತೊಳೆದುಕೊಂಡುಬಿಟ್ಟರು. ಬಾಯಿಮಾತಿನ ಸಹಾನುಭೂತಿ ತೋರಿದರು. ಆದರೂ ತಮ್ಮ ಪಾಲಿನ ಫೀಸನ್ನು ವಸೂಲಿ ಮಾಡಿಕೊಳ್ಳುವುದನ್ನು ಬಿಡಲಿಲ್ಲ! ತಮ್ಮದೇ ಆದ ವ್ಯವಹಾರ ಕೌಶಲ್ಯವನ್ನು



ತೋರಿಸಿಬಿಟ್ಟರು. ಹೀಗೆ ಕೆಟ್ಟ ಕಂಟ್ರಾಕ್ಟರರ ಕಾಟದಿಂದ ಸಾಕಷ್ಟು ನೊಂದೆ, ಬೆಂದೆ.

ದೇವರ ದಯೆಯಿಂದ ಮುಂದೆ ಕೆಲವು ಒಳ್ಳೆ ಗುತ್ತಿಗೆದಾರರೂ ದೊರೆತರು. ಮಾತುಕತೆ ಆಡಿದಂತೆ, ನಿಯತ್ತಿನಿಂದ ನಡೆದುಕೊಂಡರು. ದುಡ್ಡು - ಕಾಸು ಕಾಲಕ್ಕೆ ಸರಿಯಾಗಿ ಕೊಟ್ಟರು. ಹೀಗಾಗಿ ನಮ್ಮ ಬದುಕು ಸಾಗಲು ಅನುಕೂಲವಾಯಿತು. ಕುಂಟುತ್ತಿದ್ದರೂ ನಾಟಕಗಳು ನಿಲ್ಲದಂತಾಯಿತು.

ನನ್ನ ವೃತ್ತಿ ಜೀವನದಲ್ಲಿ ನೆರವು, ಒತ್ತಾಸೆ ನೀಡಿದ ಗುತ್ತಿಗೆದಾರರಲ್ಲಿ ನಾನು ಈಗಲೂ ನೆನೆಯುವುದು, ಶ್ರೀ ಚಂದೂಲಾಲ್ ಅವರನ್ನು. ಅಣ್ಣ ಬಾಬೂಲಾಲ್‌ರೊಂದಿಗೆ ಅವರು ನಮ್ಮ ದಾವಣಗೆರೆಯ ಕ್ಯಾಂಪನ್ನು ನಡೆಸಿಕೊಟ್ಟರು. ದುಡ್ಡುಕಾಸು ಕೊಡಲು ಎಳ್ಳಷ್ಟೂ ವಂಚನೆ, ಸತಾವಣೆ ಮಾಡಲಿಲ್ಲ. ತುಂಬಾ ಮರ್ಯಾದೆ, ಗೌರವಗಳಿಂದ ನಡೆಸಿಕೊಂಡರು. ಈ ಸಹೋದರರು ಮುಂದೆ ಅನೇಕ ಅತ್ಯಂತ ಯಶಸ್ವೀ, ಜನಪ್ರಿಯ ಕನ್ನಡ ಚಲನಚಿತ್ರಗಳನ್ನು ತಯಾರಿಸಿದರು. ಹೇರಳ ಹಣ ಸಂಪಾದಿಸಿದರು. ಆದರೆ ಗುಣಸಂಪನ್ನರಾಗಿಯೇ ಮುಂದುವರೆದಿದ್ದಾರೆ. ಈಗಲೂ ನನ್ನನ್ನು ನೋಡಿದರೆ ಸಾಕು. "ನಾವು ಈ ಕಲಾಜಗತ್ತಿಗೆ ಕಾಲಿಡಲು ನೀವೇ ಮೂಲ ಕಾರಣರು, ಪ್ರೇರಕರು"ಎಂದೆನ್ನುತ್ತಾರೆ. ಗೌರವದಿಂದ, ವಿಶ್ವಾಸದಿಂದ ಮಾತಾಡಿಸುತ್ತಾರೆ.ಎಂದರೋ ಮಹಾನುಭಾವುಲು, ಅಲ್ಲವೇ?

## ಮರೆಯಲಾದೀತೇ, ಆ ಮಹಾ ಶಿವರಾತ್ರಿಯ?

ಧಾರವಾಡದಿಂದ ಎಲ್ಲರೂ ಬೆಂಗಳೂರಿಗೆ ಮರಳಿ ಬಂದೆವು. ಅಲ್ಲಿಂದ ಹರಿಹರಕ್ಕೆ ಹೋಗಿ ಅಲ್ಲೊಂದೆರಡು- ಮೂರು ನಾಟಕ ಆಡಿದೆವು. ಮುಂದೆ ಸಿರ್ಸಿಗೆ ಹೊರಡುವುದೆಂದು ಸಿದ್ಧತೆ ನಡೆಸಿದ್ದೆವು. ಆ ವೇಳೆಗೆ ಮಂಗಳೂರಿನಲ್ಲಿ ಚಾಮುಂಡೇಶ್ವರಿ ಕಂಪನಿ ಬೀಡುಬಿಟ್ಟಿತ್ತು. ಅದರ ಒಡೆಯ ಕೊಟ್ಟೂರಪ್ಪನವರು ತಮ್ಮನ್ನು ನೋಡಲು ಬರುವಂತೆ ನನಗೆ ಕರೆಕಳಿಸಿದರು. ಅಲ್ಲಿ ನಮ್ಮದೊಂದಿಷ್ಟು ನಾಟಕವಾಡಿಸುವ ಇಚ್ಛೆ, ಇರಾದೆ ಅವರದು. ಸರಿ, ನಾನು ಮಂಗಳೂರಿಗೆ ಹೊರಟು ನಿಂತೆ. ತಂಡದವರನ್ನೆಲ್ಲಾ ಸಿರ್ಸಿಗೆ ಕಳಿಸಿಕೊಡಲು ಏರ್ಪಾಡು ಮಾಡಿದೆ. "ನೀವೆಲ್ಲಾ ಸಿರ್ಸಿಯಲ್ಲಿರಿ. ನಾನು ಮಂಗಳೂರಿಂದಲೇ ನೇರವಾಗಿ ಅಲ್ಲಿಗೆ ಬರುತ್ತೇನೆ. ನಾಟಕದ ದಿನ ಆ ಹೊತ್ತಿಗೆ ಮುಂಚೆಯೇ ಅಲ್ಲಿರುತ್ತೇನೆ" ಎಂದು ಹೇಳಿಕಳಿಸಿದೆ. ಮಂಗಳೂರಿಗೆ ಹೋದೆ. ಕೊಟ್ಟೂರಪ್ಪನವರೊಡನೆ ಮಾತಾಡಿದೆ. ನಾಟಕವೊಂದಕ್ಕೆ ಐದುನೂರು ರೂಪಾಯಿಯಂತೆ ನಮಗೆ ಕೊಡುವುದಾಗಿ ಹೇಳಿದರು. ಒಪ್ಪಂದ ಪತ್ರಕ್ಕೆ ಸಹಿಯೂ-ಹಾಕಿದೆ. ಅಲ್ಲಿಗೆ ನನ್ನ ಕೆಲಸ ಮುಗಿದ ಹಾಗಾಯಿತು.

ಅಂದು ಮಹಾಶಿವರಾತ್ರಿಯ ಪವಿತ್ರ ದಿನ. ತಟ್ಟನೆ ಮನಸ್ಸಿಗೆ ಯೋಚನೆಯೊಂದು ಬಂತು. 'ಹೇಗೂ ಇಷ್ಟು ಸನಿಹ ಬಂದಿದ್ದೇನೆ. ಸಮಯವೂ ಇದೆ. ಧರ್ಮಸ್ಥಳಕ್ಕೆ ಹೋಗಿ ಮಂಜುನಾಥನ ದರ್ಶನ ಮಾಡಬಾರದೇಕೆ? ಪುಣ್ಯವೂ ಬರುತ್ತದೆ, ಮನಸ್ಸಿಗೂ ನೆಮ್ಮದಿ. ಸಾಗರದ ಮೂಲಕ ಸಿರ್ಸಿಗೆ ಹೋಗಿ ತಲುಪಿದರಾಯ್ತು' ಎಂದುಕೊಂಡೆ. ಬಸ್‌ಸ್ಟಾಂಡಿಗೆ ಹೋದೆ. ಧರ್ಮಸ್ಥಳಕ್ಕೆ ಬಸ್ ಸಿದ್ಧವಾಗಿತ್ತು. ಅಲ್ಲಿಗೆ ತಲುಪಿ ದೇವಸ್ಥಾನಕ್ಕೆ ನಡೆದೆ. ಜನದಟ್ಟಣೆಯಿದ್ದರೂ ಸ್ವಲ್ಪ ಹೊತ್ತಿನಲ್ಲೇ ಸ್ವಾಮಿಯ ದರ್ಶನ ಸೊಗಸಾಗಿ ಆಯಿತು. ಮನದಣಿಯ ನಮಸ್ಕಾರ ಮಾಡಿ ಮಂಗಳಾರತಿ- ತೀರ್ಥ-ಪ್ರಸಾದ ಸ್ವೀಕರಿಸಿ ಬಂದೆ. ಧನ್ಯತಾಭಾವ ಮನಸ್ಸನ್ನು ಆವರಿಸಿತು. ನನ್ನ ಅದೃಷ್ಟವನ್ನೇ ಹೊಗಳಿಕೊಂಡೆ. ಸರಸರನೆ ಬಸ್‌ಸ್ಟಾಂಡಿಗೆ ನಡೆದೆ. ಸಾಗರಕ್ಕೆ ಹೊರಟಿದ್ದ ಬಸ್ ಸ್ವಲ್ಪದಲ್ಲೇ ತಪ್ಪಿ ಹೋಯಿತು. ಮುಂದಿನ ಬಸ್ಸಿರುವುದು ಮುಸ್ಸಂಜೆಗೇ ಎಂದರು. ಅಲ್ಲಿಯೇ ಕಾಫಿ- ತಿಂಡಿ ಅಂತ ಕಾಲ



ಕಳೆದು ಆ ಬಸ್ ಹತ್ತಿದೆ. ಸಾಗರ ತಲುಪಿದ್ದೇ ಏಳು ಘಂಟೆಗೆ. ಮನದಲ್ಲಿಯೇ ಧಾವಂತ ಶುರುವಾಯಿತು. 'ಆ ರಾತ್ರಿಯೇ ಸಿರ್ಸಿಯಲ್ಲಿ ನಾಟಕ. ಎಲ್ಲ ಸಿದ್ಧತೆಯೂ ನಡೆದಿರುತ್ತೆ. ನನಗಾಗಿ ತಂಡದವರೆಲ್ಲ ಕಾದಿರುತ್ತಾರೆ. ನಾನು ತಡವಾಗಿ ಹೋದರೆ ಏನು ಗತಿ? ಎಲ್ಲರೂ ಗಲಿಬಿಲಿ- ಗೊಂದಲದಲ್ಲಿ ಇರುತ್ತಾರಲ್ಲಾ', ಎಂದು ಯೋಚಿಸಿದೆ. ಸಿರ್ಸಿಗೆ ಹೋಗುವ ಬಸ್ ಇರುವುದೇ ಸರಿ- ರಾತ್ರಿಗೆ. ಅದೇ ಕೊನೆಯ ಬಸ್ ಕೂಡಾ. ಅದೂ ಬಂದರೆ ಬಂತು, ಇಲ್ಲದಿದ್ದರೂ ಇಲ್ಲವಂತೆ. ಅದರಲ್ಲಿ ಹೋದ ಪಕ್ಷದಲ್ಲಿಯೂ ನನಗೇನೂ ಉಪಯೋಗವಿಲ್ಲ. ನಾಟಕದ ವೇಳೆ ಮೀರಿಬಿಟ್ಟಿರುತ್ತೆ, ಏನು ಮಾಡುವುದು ಎಂಬ ಚಿಂತೆ ಕಾಡತೊಡಗಿತು. ಒಂದು ಟ್ಯಾಕ್ಸಿಯಲ್ಲಿ ಹೊರಟರೆ ಹೇಗೆ? ಎಂಬ ಆಲೋಚನೆ ಸುಳಿಯಿತು. ಆದರೆ ನನಗೋ, ಇದೆಲ್ಲ ಅಭ್ಯಾಸವಿಲ್ಲ. ಹೊಸ ಹೊಸ ಊರುಗಳು - ದಾರಿಗಳು- ಪ್ರಯಾಣದ ರೀತಿ, ಹೇಗೋ ಏನೋ ಎಂಬ ಭಯ- ಭೀತಿ ಕಾಡಿತು. ಕೊಟ್ಟಿದ್ದ ನಾಟಕದ ಮುಂಗಡ ದುಡ್ಡು ಪೆಟ್ಟಿಗೆಯಲ್ಲಿದೆ. ಅಲ್ಲದೆ ನನ್ನೆಲ್ಲಾ ಕಷ್ಟಕೋಟಲೆಗಳ ಮಧ್ಯದಲ್ಲೂ ಆಸೆಪಟ್ಟು, ಕಾಸಿಗೆ ಕಾಸು ಕೂಡಿಸಿ, ಆಗ ತಾನೇ ಹೊಸದಾಗಿ ಮಾಡಿಸಿಕೊಂಡಿದ್ದ ಚಿನ್ನದ ಕಾಸಿನ ನೆಕ್‌ಲೇಸ್ ಸರ ಕೊರಳಲ್ಲೇ ಇದೆ. ಇವೆಲ್ಲ ಇಟ್ಟುಕೊಂಡು ಒಬ್ಬಂಟಿಯಾಗಿ ಹೋಗುವುದು ಹೇಗೆ? ಎಂಬ ಆತಂಕವೂ ಮೂಡಿತು. ಆದರೂ, ಕರ್ತವ್ಯದ ಕರೆ ಬಲವತ್ತರವಾಗಿದೆ. ಮಾನಾಪಮಾನದ ಪ್ರಶ್ನೆಯೂ ಮುಂದಿದೆ. ಹೇಗೋ ಧೈರ್ಯ ಮಾಡಿದೆ. ನೆಕಲೇಸ್ ಕಳಚಿ ಪೆಟ್ಟಿಗೆಯಲ್ಲಿ ಭದ್ರವಾಗಿಟ್ಟೆ. ಪುಟ್ಟ ಬೀಗವೊಂದನ್ನು ಜಡಿದೆ. ಟ್ಯಾಕ್ಸಿಯೊಂದನ್ನೂ ವಿಚಾರಿಸಿಕೊಂಡು ಬಂದೆ. ಆತ ಬರಲೂ ಒಪ್ಪಿದ.

ಆದರೂ ಮತ್ತೆ ಹಿಂದೇಟು. ಕಗ್ಗತ್ತಲ ರಾತ್ರಿ, ಏಕಾಂಗಿ ಹೆಂಗಸು, ಕಾಡು ಹಾದಿ. ಕೈಯಲ್ಲಿ ಹಣ- ಕಾಸು- ಚಿನ್ನ. ಇಷ್ಟೂ ಸಾಲದೆಂಬಂತೆ ಜೋರು ಮಳೆಯೂ ಶುರುವಾಯಿತು. ನನ್ನ ಪುಣ್ಯಕ್ಕೆ ಎಣೆಯೇ ಇಲ್ಲ ಎಂದು ಅಣಕಿಸುವಂತೆ. ಹಳೆ- ಪಳೆಯ ದರೋಡೆ- ದಬ್ಬಾಳಿಕೆಯ ಕತೆಗಳೆಲ್ಲಾ ನೆನಪಾದವು. ಎದೆಯಲ್ಲಿ ಡವಡವ. ಮತ್ತೆ ಎದೆ ಗಟ್ಟಿಮಾಡಿಕೊಂಡೆ. 'ಕೊಟ್ಟ ಮಾತಿಗೆ ಯಾವತ್ತೂ ತಪ್ಪಿಲ್ಲ. ಹೇಗೂ ಇಂದು 'ಮಾತು ಬಿಡದ ಮಂಜುನಾಥನ' ದರ್ಶನ ಮಾಡಿದ್ದೇನೆ. ಅವನ ದಯೆ ನನ್ನ ಮೇಲಿರಲಿ' ಎಂದು ಪ್ರಾರ್ಥಿಸಿಕೊಂಡೆ. ಹರಕೆಯನ್ನೂ ಹೊತ್ತುಕೊಂಡೆ.

ಟ್ಯಾಕ್ಸಿಯ ಬಾಡಿಗೆ ಗೊತ್ತು ಮಾಡಿ ಒಳಗೆ ಕೂತುಕೊಂಡೆ. ಚಾಲಕನ ಜೊತೆಯಲ್ಲಿ ಮತ್ತೊಬ್ಬನಿದ್ದ. ಪ್ರಯಾಣಿಕನೋ ಇಲ್ಲಾ ಆತನ ಗೆಳೆಯನೋ ಇರಬೇಕು. ನಮ್ಮ ಪ್ರಯಾಣ ಸಾಗಿತು. ದಾರಿ ಸವೆದಂತೆ ದಟ್ಟವಾದ- ಇನ್ನೂ ದಟ್ಟವಾಗುತ್ತಿರುವ ಕಾಡು. ದಾರಿಯಲ್ಲಿ ಏನೊಂದೂ ಜನವಿರಲಿ, ಜಾನುವಾರಗಳ ಸುಳಿವೂ ಇಲ್ಲ. ವಾಹನ ಸಂಚಾರವಂತೂ ಸುತರಾಂ ಇಲ್ಲ. ಮೊದಲೇ ಅರಣ್ಯ ಪ್ರದೇಶ. ಅಲ್ಲಿ ಕಳ್ಳಸಾಗಣೆ ಅವ್ಯವಹಾರ ತಡೆಯಲೆಂದು

ವಾಹನ ಸಂಚಾರದ ಮೇಲೆ ನೂರೆಂಟು ನಿರ್ಬಂಧ- ನಿಷೇಧ ಬೇರೆ. ಸುಮಾರು ದೂರ ಹೋಗಿದ್ದೇವೆ. ಪೊಲೀಸನೊಬ್ಬ ಕೈ ದೀಪ ಹಿಡಿದು ವಿಷಲ್ ಹಾಕಿ ಟ್ಯಾಕ್ಸಿಯನ್ನು ತಡೆಹಿಡಿದು ನಿಲ್ಲಿಸಿದ. ಅವನ ಬಗಲಲ್ಲಿ ಬಂದೂಕು ಬೇರೆ. 'ಯಾರು ನೀವು? ಈ ರಾತ್ರಿಯಲ್ಲಿ ಎಲ್ಲಿಂದ ಬಂದಿರಿ? ಎಲ್ಲಿಗೆ ಹೊರಟಿದ್ದೀರಿ? ಏನು ಕೆಲಸ? ಯಾರ್‍ಯಾರಿದ್ದೀರಿ? ಗಾಡಿಯಲ್ಲಿ ಏನಿದೆ?' ಹೀಗೆ ಪ್ರಶ್ನೆಗಳ ಸುರಿಮಳೆಯನ್ನೇ ಕರೆದ. ಹದ್ದಿನ ಕಣ್ಣಿಂದ ಒಳಗೆಲ್ಲಾ ಹಣಿಕಿಕ್ಕಿದ. ನಮ್ಮ ಚಾಲಕನಿಗೆ ಏನು ಹೊಳೆಯಿತೋ ಏನೋ? ನಾನು ಬಾಯಿ ಬಿಡಲು ಎಡೆಯನ್ನೇ ಕೊಡದೆ ಈ ಡ್ರೈವರ್ 'ನೋಡಿ ಇವರೊಬ್ಬರು ಲೇಡಿ ಡಾಕ್ಟರು. ಯಾವುದೋ ಸೀರಿಯಸ್ ಡೆಲವರಿ ಕೇಸಂತೆ. ಅರ್ಜೆಂಟ್ ಚಿಕಿತ್ಸೆಗೆಂದು ಹೊರಟಿದ್ದಾರೆ. ಒಂದು ಜೋಡಿ ಜೀವ ಉಳಿಸುವ ಸಮಾಚಾರ. ಇಲ್ಲದಿದ್ದರೆ ಈ ಸರಿರಾತ್ರಿಯಲ್ಲಿ ಈ ಕಾಡು ದಾರಿಯಲ್ಲಿ ನಾವೇಕೆ ಹೋಗೋಣ?' ಎಂದು ತಟಾರನೆ ಬುರುಡೆ ಬಿಟ್ಟ! ಆತನ ಸಮಯಸ್ಫೂರ್ತಿಗೆ ನಾನೇ ಸೋಜಿಗ ಪಟ್ಟೆ, ಸುಸ್ತಾದೆ. ಆ ಪೋಲೀಸಿನವನು ನನ್ನತ್ತ ಮತ್ತೊಮ್ಮೆ ಪರೀಕ್ಷೆಯ ನೋಟ ಬೀರಿದ. ನಾನೂ ಅಷ್ಟಿಷ್ಟು- ಗತ್ತು- ಠೀವಿ ನಟಿಸಿದೆ. ಎಷ್ಟಾದರೂ ಅದೇ ನನ್ನ ಕಸುಬು- ಉಸಿರು ಅಲ್ಲವೇ? ನಾನೊಬ್ಬ ಡಾಕ್ಟರಿಣಿ ಎಂದೇ ಅವನಿಗೆ ಕಂಡಿರಬೇಕು. ನನ್ನ ಕೈ ಪೆಟ್ಟಿಗೆಯನ್ನು ಡಾಕ್ಟರರ ಕಿಟ್ ಎಂದೇ ಅಂದುಕೊಂಡನೇನೋ. ಚಾಲಕನ ಮಾತಿನಲ್ಲಿ ನಂಬಿಕೆ ಉಂಟಾಗಿರಬೇಕು. 'ಸರಿ ಸರಿ. ನಡಿ, ನಾನೂ ಅಷ್ಟು ದೂರ ಹೋಗಬೇಕು ಮುಂದೆ ಇಳಕೋತೀನಿ' ಎಂದು ತಾನೂ ಒಳಗೆ ಹತ್ತಿ ಕೂತ. ಮತ್ತೊಮ್ಮೆ ತಪ್ಪಿಯೂ ನನ್ನ ಕಡೆ ಹಿಂತಿರುಗಿ ನೋಡಲಿಲ್ಲ. ಡ್ರೈವರ್ ನೀಡಿದ ಬೀಡಿಗಳನ್ನು ಊದಿ ಊದಿ ಸೇದಿ ಹೊಗೆ ಬಿಡತೊಡಗಿದ, ಹರಟೆ ಹೊಡೆಯತೊಡಗಿದ.

ರಾತ್ರಿ ಹತ್ತೂವರೆಯ ಸಮಯವಾಗಿರಬೇಕು. ಅಷ್ಟು ಹೊತ್ತಿಗೆ ಸಿರ್ಸಿ ಗೇಟ್ ತಲುಪಿದ್ದೆವು. ನಾಟಕ ಲೇಟೆಂದರೂ ಶುರು ಆಗಬೇಕಿದ್ದು ಹನ್ನೊಂದು ಘಂಟೆಗೆ. ತಟಕ್ಕನೆ ಮತ್ತೊಮ್ಮೆ ಟ್ಯಾಕ್ಸಿಗೆ ತಡೆ. ಅಲ್ಲೇನು ಗಲಾಟೆಯೋ? ಗಲಭೆಯೋ? ಅರಣ್ಯ ಸಂಪತ್ತಿನ ಲೂಟಿಯ ಬಗ್ಗೆ ಸುದ್ದಿ- ಸುಳಿವು- ಸಂಶಯವೋ? ಪೊಲೀಸರ ಒಂದು ತಂಡವೇ ಅಲ್ಲಿ ಬೀಡು ಬಿಟ್ಟಿದೆ. ಬೇರೆ ಬೇರೆ ದಿಕ್ಕು - ದಾರಿಗಳಿಂದ ಬಂದ ಸುಮಾರು ವಾಹನಗಳು ಸಾಲಾಗಿ ನಿಂತುಬಿಟ್ಟಿವೆ. ಒಂದೊಂದನ್ನೂ ನಿಧಾನವಾಗಿ ತಪಾಸಣೆ ಮಾಡಿ, ತನಿಖೆ ನಡೆಸಿ, ಬಿಡುತ್ತಿದ್ದಾರೆ. ಏನಿಲ್ಲವೆಂದರೂ ಒಂದೊಂದು ವಾಹನಕ್ಕೂ ಆರೆಂಟು ನಿಮಿಷಗಳು, ನಮ್ಮ ಸರದಿ ಬರಲು ಸಾಕಷ್ಟು ಸಮಯವೇ ಬೇಕು. ನನಗೋ ಮುಳ್ಳಿನ ಮೇಲೆ ಕುಳಿತಂಥ ಅನುಭವ. ಅಲ್ಲೇ ಸುಮಾರು ದೂರದಲ್ಲಿ ದೀಪಮಾಲಿಕೆಗಳು ಬೀರುತ್ತಿರುವ ಬೆಳಕು ಮಿಣುಕು- ಮಿಣುಕಾಗಿ ಕಾಣಿಸುತ್ತಿದೆ. ಧ್ವನಿವರ್ಧಕದಿಂದ ಬಿತ್ತರಿಸುತ್ತಿರುವ ಹಾಡುಗಳು, ತುಣುಕು- ತುಣುಕಾಗಿ ಕೇಳಿಸುತ್ತಿವೆ. ಅದೇ ನಾಟಕದ ಟೆಂಟ್ ಎಂದು ಗ್ಯಾರಂಟಿಯಾಯಿತು.



'ಎಷ್ಟು ಹತ್ತಿರ, ಆದರೂ ಎನಿತು ಅಂತರ' ಎಂಬ ಪರಿಸ್ಥಿತಿ. ಅಷ್ಟು ಹತ್ತಿರದಲ್ಲಿದ್ದರೂ ನಾನು ಇಳಿದು ಹೋಗುವ ಹಾಗಿಲ್ಲ, ಗಾಡಿಯೂ ಮುಂದೆ ಸಾಗುವಂತಿಲ್ಲ. ನಮ್ಮ ವಾಹನದ ಚೆಕ್ಕಿಂಗ್ ಆಗಬೇಕು. ಮುಂದಿನ ವಾಹನಗಳು ಒಂದೊಂದಾಗಿ ಆಮೆ ವೇಗದಲ್ಲಿ ಸಾಗುತ್ತಿವೆ. ನನಗಂತೂ ಮೈಯೆಲ್ಲ ಪರಚಿಕೊಳ್ಳುವಂತಾಯಿತು. ಕಾರಿನಲ್ಲಿ ಕೂತಿರಲಾಗುತ್ತಿಲ್ಲ. ಮಂಜಿನ ಮೇಲೆ ನಿಂತ ಹಾಗೆ ಹಿಂಸೆ, ಅಸಹನೆ. ಕೆಳಗಿಳಿದು ಪೊಲೀಸ್ ಅಧಿಕಾರಿಯ ಬಳಿ ಹೋಗಿ 'ವಿಷಯ ಹೀಗೆ, ನಾಟಕವಾಡಲು ನಾನು ಬೇಗ ಹೋಗಬೇಕು' ಎಂದು ಅಹವಾಲು ಹೇಳಿಕೊಳ್ಳಲೇ, ಅಲವತ್ತುಕೊಳ್ಳಲೇ? ಎನಿಸಿತು. ಟ್ಯಾಕ್ಸಿಯಲ್ಲಿ ನಮ್ಮ ಜೊತೆಗೇ ಬಂದಿದ್ದ ಪೊಲೀಸನನ್ನೂ ಮುಂದಿಟ್ಟುಕೊಂಡು ಹೋದರೆ ಹೇಗೆ ಎಂದೂ ಅನ್ನಿಸಿತು. ಆತನೋ ಗೊರಕೆ ಹೊಡೆಯುತ್ತಾ ಗಾಡ ನಿದ್ದೆಯಲ್ಲಿದ್ದ. ಹೇಗೂ ಆತನ ಡ್ಯೂಟಿಯ ಅವಧಿ- ಜಾಗ ದೂರ ಸರಿದಿತ್ತಲ್ಲ?! ಆತನತ್ತ ದೃಷ್ಟಿ - ಗಮನ ಸರಿದ ಹಾಗೆ ಒಂದು ಸಂಗತಿ ತಟ್ಟನೆ ನನ್ನ ನೆನಪಿಗೆ ಬಂತು. ಅದೇ, ಆತನಿಗೆ ನಮ್ಮ ಟ್ಯಾಕ್ಸಿ ಚಾಲಕ ಹೇಳಿದ್ದ ಸುಳ್ಳು- 'ಸತ್ಯದ ತಲೆಯ ಮೇಲೆ ಹೊಡೆದಂತಹ ತಾಜಾ ಸುಳ್ಳು!' ಈಗ ಸತ್ಯ ಹೇಳಲಿಕ್ಕಾಗುತ್ತದೆಯೇ? ಹೇಳಿ ಸಿಕ್ಕಿ ಹಾಕಿಕೊಳ್ಳಲಾದೀತೇ? ಸರಿ, ಸುಳ್ಳಿನ ನಾಟಕ ಶುರುವಾಗಿದೆ. ಉಳಿದ ಅಂಕಗಳನ್ನೂ ಆಡಿ ಬಿಡೋಣ ಎಂದಿತು ಮನಸ್ಸು.

ಗಾಡಿಯಿಂದಿಳಿದು ನೇರವಾಗಿ ಪೊಲೀಸ್ ಅಧಿಕಾರಿಯೊಬ್ಬರ ಬಳಿ- ಹೋಗಿ ನಿಂತೆ ''ನೋಡಿ, ನಾನೊಬ್ಬ ಡಾಕ್ಟರು. ಅಲ್ಲಿ ಟೆಂಟು ಕಾಣುತ್ತಿದೆಯಲ್ಲಾ? ಅದರ ಹತ್ತಿರವೇ ಮನೆಯೊಂದಕ್ಕೆ ಹೋಗಬೇಕು. ಡೆಲಿವರಿ ಕೇಸು. ತುಂಬಾ ಅರ್ಜೆಂಟಾಗಿ ಹೋಗಬೇಕೂಂತ ಟ್ಯಾಕ್ಸಿ ಗೊತ್ತು ಮಾಡಿಕೊಂಡು ಬರುತ್ತಿದ್ದೇನೆ. ಎರಡು ಜೀವ ಉಳಿಸಬೇಕಾದ ಜವಾಬ್ದಾರಿ ನನ್ನ ಮೇಲಿದೆ. ನೀವು ಅಪ್ಪಣೆ ಕೊಟ್ಟರೆ ನಾನು ನಡೆದೇ ಹೋಗುತ್ತೇನೆ. ಗಾಡಿಯನ್ನು ಬೇಕಾದರೆ ನಿಧಾನವಾಗಿ ಚೆಕ್ ಮಾಡಿ ಕಳಿಸಿಕೊಡಿ'' ಎಂದು ಒಂದೇ ಸಮನೆ ಒದರಿದೆ.

ನನ್ನ ಆತುರ- ಕಾತುರದ, ಧ್ವನಿ- ಅಭಿನಯ ನೋಡಿ ಆತನಿಗೇನ್ನಿಸಿತೋ? ಆತ ಬಾಯಿ ಬಿಡುವ ಮುನ್ನವೇ ನಮ್ಮ ಗಾಡಿಯಲ್ಲಿದ್ದ ಪೊಲೀಸನೂ ಕಣ್ಣುಜ್ಜುತ್ತಾ ನಮ್ಮ ಹತ್ತಿರ ಬಂದು ನಿಂತ. ಸಾಹೇಬರಿಗೆ ಶಿಸ್ತಾಗಿ ಒಂದು ಸೆಲ್ಯೂಟ್ ಹೊಡೆದ. 'ನಾನು ಇದೇ ಗಾಡೀಲಿ ಲಿಫ್ಟ್ ತೊಗೊಂಡು ಬರುತ್ತಿದ್ದೀನಿ ಸಾರ್. ಈ ಡಾಕ್ಟಮ್ಮ ಒಂದು ಡೆಲಿವರಿ ಕೇಸ್ ಅಟೆಂಡ್ ಮಾಡ್ಬೇಕಂತೆ, ಕಳಿಸಿಬಿಡೋಣವಾ ಸಾರ್' ಎಂದು ರಾಗವೆಳೆದ. ಆ ಅಧಿಕಾರಿಗೆ ನಂಬಿಕೆ ಬಂದ ಹಾಗೆ ಕಂಡಿತು. ಆತ ಹಾಂ! ಹಾಂ! ಎಂದಷ್ಟೇ ದರ್ಪದಿಂದ ಉತ್ತರಿಸಿ 'ನೋಡಿ ಈ ಅಮ್ಮಾವ್ರ ಗಾಡಿ ಕಳಿಸಿಕೊಟ್ಟುಬಿಡಿ' ಎಂದು ತನ್ನ ತಂಡದವರಿಗೆ ಆರ್ಡರ್ ಮಾಡಿದ. 'ನೀವು ಹೋಗಿ ಡಾಕ್ಟರ್' ಎಂದು ಹೇಳಿ ಮತ್ತೆ ತನ್ನ ಡ್ಯೂಟಿಗೆ ತೊಡಗಿದ. ನಿಜಕ್ಕೂ ದೊಡ್ಡ ಪುಣ್ಯ ಕಟ್ಟಿಕೊಂಡ. ನಾನು ಧನ್ಯವಾದ ಹೇಳಿ ಹೊರಟೆ. ಜೊತೆಗೆ ಬಂದ

ಪೊಲೀಸನೂ ಅವರೊಡನೆಯೇ ನಿಂತು ನನಗೊಂದು ಬಿಟ್ಟಿ ಸೆಲ್ಯೂಟ್ ನೀಡಿದ! ನಮ್ಮ ಗಾಡಿ ಮುಂದೆ ಹೋಯಿತು.

ನಾನು ಕಾರಿಂದಿಳಿದವಳೇ ದಡದಡನೇ ಓಡಿ ರಂಗಮಂದಿರ ಪ್ರವೇಶಿಸಿದೆ. ಅಲ್ಲಿ ಆಗಲೇ ನಾಟಕ ಆರಂಭವಾಗಿ ಬಿಟ್ಟಿದೆ. ಮ್ಯಾನೇಜರ್ ನನ್ನಲ್ಲಿಗೆ ದೌಡಾಯಿಸಿ ಬಂದು "ನಾನು ಜನರಿಗೆ ಪರಿಸ್ಥಿತಿ ವಿವರಿಸಿದ್ದೇನೆ. ನಾಗರತ್ನಮ್ಮನೋರು ಬರುವುದು ತಡವಾಗಿರೋದರಿಂದ ಇವತ್ತು ಕೃಷ್ಣಗಾರುಡಿ ಬದಲು ಸುಭದ್ರಾ ಪರಿಣಯ ಆಡುತ್ತೀವಿ, ದಯವಿಟ್ಟು ಸಹಕರಿಸಿ-ಅಂತ, ಅವರೂ ಒಪ್ಪಿದ್ದಾರೆ. ನಾಟಕ ನಡೀತಿದೆ. ನೀವು ವಿಶ್ರಾಂತಿ ತೊಗೊಳ್ಳಿ" ಎಂದರು. ಆದರೆ ಆ ವೇಳೆಗಾಗಲೇ ನಾನು ಬಂದದ್ದು ಅದು ಹೇಗೋ ಅರೆಗಳಿಗೆಯಲ್ಲಿ ಜನಕ್ಕೆ ಗೊತ್ತಾಗಿಬಿಟ್ಟಿದೆ. ಎಲ್ಲರದೂ ಒಂದೇ ಗಲಾಟೆ: 'ಹೇಗೂ ನಾಗರತ್ನಮ್ಮನೇ ಬಂದಿದ್ದಾರೆ. ಕೃಷ್ಣಗಾರುಡಿಯನ್ನೇ ಆಡಿಸಬೇಕು'. ನಾನು ಸ್ಟೇಜ್ ಹತ್ತಿ ಮೈಕ್ ಬಳಿ ಹೋದೆ. "ಮಹಾಜನರು ಮನ್ನಿಸಬೇಕು. ಈಗಾಗಲೇ ಮಧ್ಯರಾತ್ರಿಯಾಗಿದೆ. ಮೇಕಪ್ಪು ಅದೂ- ಇದೂ ಅಂತ ನಾನು ಸಿದ್ಧ- ಆಗೋಕೆ ಇನ್ನೊಂದು ಮುಕ್ಕಾಲು ಘಂಟೆಯಾದರೂ ಆಗೇ ಆಗುತ್ತೆ. ಇಷ್ಟಕ್ಕೂ 'ಸುಭದ್ರಾ ಪರಿಣಯ' ಪ್ರಾರಂಭವಾಗಿದೆ. ಇವತ್ತು ಅದನ್ನೇ ನೋಡಿ ಸಂತೋಷ ಪಡಿ. ನಾಳೆ ಖಂಡಿತಾ ನಿಮ್ಮ ಮುಂದೆ ಗಾರುಡಿ ಆಡೇ ಆಡುತ್ತೇವೆ". ಎಂದು ಮನವಿ ಮಾಡಿದೆ. ಅದಕ್ಕೆ ಅವರದು ಒಂದೇ ದನಿಯ ಮಾರುತ್ತರ "ಇನ್ನೂ ತಡವಾದರೂ ಪರವಾಗಿಲ್ಲ, ಕಾಯುತ್ತೇವೆ. ಗಾರುಡಿಯನ್ನೇ ಆಡಿ. ಅದನ್ನು ನೋಡೋದಕ್ಕೇ ನಾವೆಲ್ಲ ಗಾಡಿ - ಬಂಡಿ ಕಟ್ಟಿಕೊಂಡು ದೂರ- ದೂರದಿಂದ ಬಂದಿರೋದು. ನಾಳೆ ಮಾತು ಬೇರೆ!" ಇದು ಅವರ ಮೊಂಡು ಹಠವಲ್ಲ. 'ಕೃಷ್ಣಗಾರುಡಿ'ಯನ್ನೇ ನೋಡಬೇಕೆಂಬ ಕಡು ಹಂಬಲ. ಅವರ ಅಭಿಮಾನದ ಅಪೇಕ್ಷೆಯನ್ನು ಉಪೇಕ್ಷಿಸುವ, ಅಲಕ್ಷಿಸುವ, ಧೈರ್ಯ, ಧಿಮಾಕು ನನಗೆಲ್ಲಿ? ಜನಮಾನಸಕ್ಕೆ ತಲೆಬಾಗಿದೆ. ಪರಿಣಯಕ್ಕೆ ಅರ್ಧದಲ್ಲೇ ತೆರೆ ಬಿತ್ತು! ಇದ್ದುದರಲ್ಲೇ ಬೇಗ ಬೇಗ ಸಿದ್ಧಳಾಗಿ ಭೀಮನ ಉಡುಗೆ- ತೊಡುಗೆ ಧರಿಸಿ, ಗದೆ ಹಿಡಿದು ರಂಗದ ಮೇಲೆ ತುಂಬು ಮನದಿಂದ ಸುಮ್ಮಾನದಿಂದ ಹೋದೆ. ಜನ ಕಣ್ಣಿಗೆ ಎಣ್ಣೆ ಬಿಟ್ಟುಕೊಂಡವರಂತೆ ನೋಡಿದರು. ನಲಿದರು. ಚಪ್ಪಾಳೆಯಿಟ್ಟರು. ನಾಟಕ ಮುಗಿದ ಮೇಲೆ ಹೂ- ಹಾರವನ್ನೂ ಹಾಕಿ ಹಿಗ್ಗಿದರು.

ಬಣ್ಣದ ಕೋಣೆಗೆ ಹೋಗಿ ಮುಖತೊಳೆದು ಬಟ್ಟೆ ಬದಲಿಸಿ ಹೊರಬಂದೆ. ಆರಾಮ ಖುರ್ಚಿಯೊಂದರಲ್ಲಿ ವಿರಮಿಸಿ ಕಣ್ಣು ಮುಚ್ಚಿದೆ. ತಂಗಾಳಿಗೆ ನಿದ್ದೆ ಸುಳಿದಂತಾಯಿತು. ಅರೆ ನಿಮಿಷದಲ್ಲೇ ಟಪ್ ಟಪ್ ಎಂಬ ಬೂಡ್ಸಿನ ಶಬ್ದ ಕೇಳಿ ಕಣ್ತೆರೆದು ನೋಡಿದೆ. ಎದುರಿಗೆ ಅದೇ.... ಆ.... ಪೊಲೀಸ್ ಅಧಿಕಾರಿ! ವಾಹನ ತನಿಖೆ ಮಾಡುತ್ತಿದ್ದವರು. ಎದೆ ಧಸಕ್ಕೆಂದಿತು. ಆಗ ನಾನು ಸಲೀಸಾಗಿ ತೇಲಿ ಬಿಟ್ಟಿದ್ದ ಸುಳ್ಳೇ ಈಗ ನನಗೆ ಅಳುಕು,



ಅಂಜಿಕೆ ತಂದಿತು. ಹುರಿಮೀಸೆಯ ಆ ಭರ್ಜರಿ ಆಸಾಮಿ ಮುಂದೆಯೇ ಬಂದು ನಿಂತ. ಆದರೆ ಮುಖದ ಮೇಲೆ ಅದೇನೋ ತುಂಬು ನಗೆ. ಅದನ್ನು ನೋಡಿದೊಡನೆಯೇ ನನಗೆ ತಟ್ಟನೆ ಸಮಾಧಾನವಾಯಿತು. "ಏನು ಡಾಕ್ಟ್ರಮ್ಮ, ಡೆಲಿವರಿ ಸರಿಯಾಗಿ ಮಾಡಿಸಿದಿರಾ?ಮಗು ಗಂಡೋ, ಹೆಣ್ಣೋ? ಮಗು - ಬಾಣಂತಿ ಆರೋಗ್ಯವಾ?" ಎಂದು ತುಂಟ ಪ್ರಶ್ನೆಗಳನ್ನೆಸೆದ. ನನಗೂ ನಗೆ ತಡೆಯಲಾಗಲಿಲ್ಲ. ಪರಿಸ್ಥಿತಿ ಅವರಿಗೂ ಪೂರ್ತಿ ಅರಿವಾಗಿತ್ತು, ಅರ್ಥವಾಗಿತ್ತು. ನಾನು ಏನೂ ಹೇಳಹೋಗಲಿಲ್ಲ. ಹೇಳಬೇಕಾಗಿಯೂ ಇರಲಿಲ್ಲ. ಸುತ್ತಲಿದ್ದವರಿಗೆ ಸೋಜಿಗವಷ್ಟೇ. ಖುರ್ಚಿ ತರಿಸಿ- ಕೂಡಿಸಿದೆ, ಕಾಫಿ ತರಿಸಿಕೊಟ್ಟೆ. "ಒಟ್ಟಿನಲ್ಲಿ ಮೇಡಂ, ಸ್ಟೇಜ್ ಮೇಲಷ್ಟೇ ಅಲ್ಲ, ಎಲ್ಲೆಲ್ಲೂ ಚೆನ್ನಾಗಿ ಡ್ರಾಮಾ ಕಟ್ಟುತ್ತೀರಲ್ಲ" ಎನ್ನುತ್ತಾ ನನ್ನ ನಟನೆಯನ್ನೂ, ಅಂದಿನ ನಾಟಕವನ್ನೂ ಪದೇ ಪದೇ ಹೊಗಳಿದರು. ನನಗೇ ಮುಜುಗರವಾಯಿತು. ನಮ್ಮ ನಾಟಕಗಳಿಗೆ ಸಂಸಾರ, ಸಿಬ್ಬಂದಿ ಸಹಿತ ಬರಬೇಕೆಂದು ಆಹ್ವಾನವಿತ್ತೆ. "ನಿಮ್ಮ ಕ್ಯಾಂಪು ಪೂರಾ ಆಗಾಗ ಬರುತ್ತಲೇ ಇರುತ್ತೀನಿ ಮೇಡಂ, ನನ್ನ ಟಿಕೆಟ್ ಕೇಳಬೇಡೀಂತ ನಿಮ್ಮ ಹುಡುಗರಿಗೆ ಹೇಳಿ ಬಿಡಿ" ಎಂದರಾತ. ಮರೆತದ್ದನ್ನು ನೆನಪಿಸಿಕೊಂಡವಳಂತೆ ನಾಟಕವಾಡಲು ನನ್ನನ್ನು ಬೇಗ 'ಬಿಡುಗಡೆ' ಮಾಡಿದ್ದಕ್ಕೆ ಅವರಿಗೆ ಮತ್ತೆ ಮತ್ತೆ ವಂದನೆ ಹೇಳಿದೆ. 'ಅಲ್ಲ, ಅದಕ್ಕಲ್ಲ- ಹೆರಿಗೆ ಮಾಡಿಸೋದಕ್ಕೆ ನಿಮ್ಮನ್ನು ಬೇಗ ಬಿಟ್ಟಿದ್ದು' ಎಂದು ನಗುನಗುತ್ತಾ ಹೊರಟರು.

ಅನಂತರವೇ ನನಗೆ ಗೊತ್ತಾಗಿದ್ದು: ಡ್ಯೂಟಿ ಮುಗಿಸಿಕೊಂಡ ಅವರ ಇಡೀ ತಂಡ ನಮ್ಮ ನಾಟಕ ನೋಡಲು ಬಂದಿತ್ತಂತೆ. ಆದರೆ ನನ್ನ ಗುರ್ತು ಪತ್ತೆ ಹಚ್ಚಿದ್ದು ಈ ಪ್ರಚಂಡ ಮಾತ್ರವೇ! ನಿಜಕ್ಕೂ ಆತನದು ಹದ್ದಿನ ಕಣ್ಣೇ ಸೈ. ಆತ 'ಪೊಲೀಸ್ ಡಿಪಾರ್ಟ್‌ಮೆಂಟ್‌ಗೆ ಹಂಡ್ರೆಡ್ ಪರ್ಸೆಂಟ್ ಲಾಯಕ್ಕು' ಎಂದುಕೊಂಡು ಆತನಿಗೆ ಮನಸ್ಸಿನಲ್ಲೇ ಶಭಾಸ್‌ಗಿರಿ ಕೊಟ್ಟೆ.

ಆ ರಾತ್ರಿ ಊಟ ಮುಗಿಸಿ ಕೈ ತೊಳೆದು ಬಂದು ಹಾಸಿಗೆ ಮೇಲೆ ಕೂತೆ. ದೇವರಿಗೆ ಕೈ ಮುಗಿದು ಮಲಗುವ ಮುನ್ನ ಮನಸ್ಸಿಗೆ ಯೋಚನೆಯೊಂದು ಬಂತು. ಇಡೀ ರಾತ್ರಿ ಅದು ನನ್ನನ್ನಾವರಿಸಿಕೊಂಡಿತು: ಈ ಭೀಮನ ಪಾತ್ರ ನನಗೇ ಅರಿವಿಲ್ಲದಂತೆ ನನಗೆಷ್ಟೊಂದು ಪ್ರೀತಿ- ವಿಶ್ವಾಸ, ಮಾನ - ಸನ್ಮಾನ ತಂದು ಕೊಟ್ಟಿದೆ. ಅಷ್ಟೇ ಅಲ್ಲ, ನಿಜ ಜೀವನದಲ್ಲೂ ನನಗೆ ಸಾಕಷ್ಟು ಆತ್ಮವಿಶ್ವಾಸ, ಸಾಹಸ- ಧೈರ್ಯಗಳನ್ನೂ ತುಂಬಿ ಕೊಟ್ಟಿದೆಯಲ್ಲಾ? ಅಲ್ಲವಾದರೆ ಈ ನಡು ರಾತ್ರಿಯಲ್ಲಿ, ಕಾಡು ದಾರಿಯಲ್ಲಿ, ಜಡಿ ಮಳೆಯಲ್ಲಿ, ದುಡ್ಡು ಕಾಸು ಇಟ್ಟುಕೊಂಡ ಒಬ್ಬಂಟಿ ಹೆಂಗಸು ಟ್ಯಾಕ್ಸಿಗಾಡಿಯ ಪ್ರಯಾಣ ಮಾಡುವುದೆಂದರೇನು? ಸುರಕ್ಷಿತವಾಗಿ ಸಕಾಲದಲ್ಲಿ ಸರಿಯಾದ ಜಾಗ ಮುಟ್ಟುವುದೆಂದರೇನು? ಗಂಡು ಪಾತ್ರ ಮಾಡ- ಮಾಡುತ್ತಿದ್ದ ಹಾಗೆಯೇ ಗಂಡಿನ ಗುಂಡಿಗೆ- ಸಾಹಸ ನನ್ನ ಗುಣ- ಸ್ವಭಾವದಲ್ಲಿ

ನನಗೂ ಗೊತ್ತಾಗದ ಹಾಗೆ ಮೈಗೂಡಿ ಬಿಟ್ಟಿತಲ್ಲಾ! ಒಂದು ಕ್ಷಣ ಮೈಯೆಲ್ಲಾ 'ಝುಂ' ಎಂದುಬಿಟ್ಟಿತು. ಅಂದಿನ ನನ್ನ ಧೈರ್ಯ, ಛಲ ನೆನಪಿಸಿಕೊಂಡರೆ ನನಗೆ ಇಂದೂ ಸೋಜಿಗವೆನಿಸುತ್ತದೆ. ನನ್ನ ಬೆನ್ನನ್ನು ನಾನೇ ತಟ್ಟಿಕೊಂಡು 'ಭೇಷ್' ಎಂದುಕೊಳ್ಳಬೇಕೆನಿಸುತ್ತದೆ. ಅಂದಿನ ಸಾಹಸ ನನ್ನನ್ನು ಮುಂದೆ ಇನ್ನೂ ಅನೇಕ ಹೊಸ ಹೊಸ ಸಾಹಸಗಳಿಗೆ ಪ್ರೇರೇಪಿಸಿ ನನ್ನನ್ನು ಗೆಲ್ಲಿಸಿದೆ. ಅಂದಿನ ರಾತ್ರಿ ನನ್ನ ಪಾಲಿಗೆ 'ಎಂದೆಂದಿಗೂ ಮರೆಯಲಾಗದ, ಮರೆಯಬಾರದ ಮಹಾ ಶಿವರಾತ್ರಿಯೇ' ಆಗಿದೆ.

ಸಿರ್ಸಿ ಕ್ಯಾಂಪಿನಿಂದ ನಾವೆಲ್ಲ ಮಂಗಳೂರಿಗೆ ಹೋದೆವು. ಕೊಟ್ಟೂರಪ್ಪನವರು ಹೂಡಿದ್ದ ಕ್ಯಾಂಪಿನಲ್ಲೇ ನಮ್ಮ ನಾಟಕಗಳು. ಅಲ್ಲಿನ ಒಂದು ಪ್ರದರ್ಶನಕ್ಕೆ ಅಂದಿನ ಹಣಕಾಸು ಮಂತ್ರಿಗಳಾಗಿದ್ದ ರಾಮಕೃಷ್ಣ ಹೆಗಡೆ ಮುಖ್ಯ ಅತಿಥಿಗಳು. ಅವರು ನಮ್ಮ ನಾಟಕವನ್ನು ನೋಡಿ ಮನಸಾರೆ ಹೊಗಳಿದರು. 'ಪುರುಷ ಪಾತ್ರಗಳನ್ನು ಪುರುಷರಿಗಿಂತಲೂ ಹೆಚ್ಚಿನ ಪೌರುಷದಿಂದ ಚೆನ್ನಾಗಿ ನಿರ್ವಹಿಸಿದಿರಿ' ಎಂದು ಎಲ್ಲಾ ಕಲಾವಿದರಿಗೂ ಶಭಾಷ್‌ಗಿರಿ ನೀಡಿದರು. ತಮ್ಮ ಅಭಿಮಾನ - ಮೆಚ್ಚುಗೆಯ ಕೊಡುಗೆಯೆಂದು ನನಗೊಂದು ಬೆಳ್ಳಿಯ ಲೋಟವನ್ನು ನೀಡಿದರು. ಬೇರೆಯವರಿಗೂ ಭಕ್ಷೀಸು ಸಂದಿತು. ಆ ಕಾಲಕ್ಕೆ ನನಗೆ ಅದೇ ದೊಡ್ಡ ಪ್ರಶಸ್ತಿ - ಪಾರಿತೋಷಕ! ಮುಂದೆ ಮಂಗಳೂರಿನಲ್ಲಿ ನನಗೆ ಇನ್ನೊಂದು ರೀತಿಯ ಬಹುಮಾನವೂ ಕಾದಿತ್ತು!

## ಯಾರ ದೃಷ್ಟಿ ತಟ್ಟಿತೋ -ಅದೃಷ್ಟವೇ ಕೈ ಕೊಟ್ಟಿತೋ?

ಮಂಗಳೂರಿನಲ್ಲಿ ಒಂದು ದಿನ ಕೃಷ್ಣ ಗಾರುಡಿ. ಭೀಮ ಗಾರುಡಿಯ ಹಾವನ್ನು ಗರಡಿಯ ಪೈಲ್ವಾನನಂತೆ ಎತ್ತಲು ಯತ್ನಿಸಿ ವಿಫಲನಾಗಿ ಆಯ ತಪ್ಪಿ ಕುಸಿದು ಬೀಳುವ ದೃಶ್ಯ. ನಾನೇನೋ ಆ ಕೃತಕ ಹಾವನ್ನು ಸಹಜ ಹಾವಭಾವ ಸಹಿತ ಮಾಮೂಲಿನಂತೆ ಮೇಲಕ್ಕೆತ್ತಿದೆ. ಆದರೆ ಏನೋ ವ್ಯತ್ಯಾಸವಾಗಿ ಅದು ಸ್ಪ್ರಿಂಗಿನಂತೆ ಚಿಮ್ಮಿ ಹಿಂಭಾಗಕ್ಕೆ ಹೋಗಿ ಬಿದ್ದು ಬಿಟ್ಟಿತು. ಸನ್ನಿವೇಶದ ಪ್ರಕಾರ ಅದು ಬಿದ್ದಲ್ಲೇ ಬಿದ್ದಿರಬೇಕು. ನಾನು ಜೋಲಿ ತಪ್ಪಿದವಳಂತೆ ನಟಿಸುತ್ತಾ, ಬೀಳಬೇಕು. ಆದರೆ ಅವತ್ತು ಆದದ್ದೇ ಬೇರೆ, ಅನಿರೀಕ್ಷಿತ- ಆಕಸ್ಮಿಕ! ಹಾರಿಬಿದ್ದ ಹಾವನ್ನು ಹಿಡಿಯಲು ಹೋದ ನನಗೆ ಸಮತೋಲನವೇ ತಪ್ಪಿಹೋಯಿತು. ಕಾಲು ಜರ್ರನೆ ಜಾರಿಬಿಟ್ಟಿತು. ತಲೆಯೂ ತಿರುಗಿದಂತಾಯಿತು. ದಢಾರನೆ ನಿಜವಾಗಿಯೇ ಕುಸಿದು ಬಿದ್ದು ಬಿಟ್ಟೆ. ಮೇಲೇಳುವ ಸ್ಥಿತಿಯಲ್ಲೇ ನಾನಿರಲಿಲ್ಲ. ಮರುಕ್ಷಣದಲ್ಲೇ ಕಾಲು ಉಳುಕಿದಂತೆ ಭಾಸವಾಯಿತು. ಅಸಾಧ್ಯ ಛಳುಕು ಬೇರೆ. ''ಸೋದರರೇ, ಈ ಬಾಧೆ ತಾಳಲಾರೆ''. ಇದು ನಾಟಕದಲ್ಲಿನ ನನ್ನ ಮುಂದಿನ ಸಂಭಾಷಣೆ. ಏನು ವಿಚಿತ್ರ? ಎಂಥಾ ಸಚಿತ್ರ! ನಾನು ನಿಜವಾಗಿಯೂ ಸಹಿಸಲಾರದ ಬಾಧೆಯನ್ನೇ ಅನುಭವಿಸುತ್ತಿದ್ದೇನೆ. ಕಣ್ಣಲ್ಲಿ ನೀರು ಸುರಿದಿದೆ, ಧಾರೆಯಾಗಿ ಹರಿದಿದೆ. ಬಮ್ಮಡಿ ಹೊಡೆದುಕೊಳ್ಳಬೇಕೆನಿಸುವಷ್ಟು ನೋವು, ಸಂಕಟ. 'ಆಹಾ! ಎಂಥಾ ಸಹಜ, ನೈಜ ನಟನೆ' ಎಂದುಕೊಂಡಿರಬೇಕು ನನ್ನ ಸಹಕಲಾವಿದರು, ನೋಡುಗರು. ಅಷ್ಟು ಚುರುಕಾಗಿತ್ತು ನನ್ನ ಚಲನೆ! ಆ ನೋವಿನಲ್ಲೂ ನಾಟಕದ್ದಲ್ಲದ ಮಾತುಗಳನ್ನು ಆಡುವಂತಿಲ್ಲ, ಅಯ್ಯೋ - ಅಮ್ಮಾ ಎಂದು ಮನಕ್ಕೆ ಬಂದಂತೆ ನರಳುವಂತಿಲ್ಲ, ರಾಮಕೃಷ್ಣ ಎನ್ನುವಂತಿಲ್ಲ. ಏಕೆಂದರೆ ಅದು ಬಿಗುಮಾನದಿಂದ ಬೀಗುವ, ಬಡಾಯಿ ಕೊಚ್ಚುವ ಭೀಮನ ಪಾತ್ರ!

ಆ ದೃಶ್ಯ ಮುಗಿದರೂ ನಾನು ಏಳಲಾಗದೆ ನೆಲಕ್ಕೆ ಒರಗಿದ್ದೆ, ಒದ್ದಾಡುತ್ತಿದ್ದೆ. ಅದನ್ನು 'ನಕುಲ' ನ ಪಾತ್ರಧಾರಿಣಿ ನೋಡಿದಳು. ಅವಳಿಗೇನೋ ಅನುಮಾನ ಬಂತು. 'ಮೇಡಂಗೆ

ನಿಜವಾಗಿಯೂ ಏನೋ ಹೆಚ್ಚು - ಕಮ್ಮಿ ಆಗಿರಬೇಕು' ಎಂದು ಊಹಿಸಿದಳು. ಜೊತೆಯಲ್ಲಿದ್ದವರಿಗೆ ಹೇಳಿ ಪರದೆ ಜಾರಿಸಿದಳು. ಬೇರೆಯವರನ್ನೂ ಕೂಗಿ ಕರೆದಳು. ಎಲ್ಲರೂ ನನ್ನ ಸುತ್ತ ಜಮಾಯಿಸಿದರು. ವಿವರವಾಗಿ ವಿಚಾರಿಸಿದರು. ಆಗಲೇ ಅವರಿಗೆ ಯಜಮಾನಮ್ಮನ ನಿಜಸ್ಥಿತಿ, ಫಜೀತಿ, ಅದರ ಗಂಭೀರತೆ ಗೊತ್ತಾದದ್ದು!

ನನ್ನನ್ನು ತೆರೆಯ ಹಿಂದಿನ ಬಣ್ಣದ ಕೋಣೆಗೆ ಎತ್ತಿಕೊಂಡು ಹೋದರು. ಎತ್ತರದ ಕುರ್ಚಿಮೇಲೆ ಕೂರಿಸಿದರು. ಕುಡಿಯಲು ನೀರು, ಕಾಫಿ ತಂದುಕೊಟ್ಟರು. ಯಾವುದೋ ತೈಲವನ್ನೂ ಬಳಿದರು. ನವಿರಾಗಿ ನೀವಿದರು. ನೋವು ರವೆಯಷ್ಟೂ ಉಪಶಮನವಾಗಲಿಲ್ಲ. ನಾಟಕದ ಕಂಟ್ರಾಕ್ಟರ್ ಆಳ್ವ ಅವರದೇ ಒಂದು ಹೋಟೆಲ್ ಇತ್ತು. ಅಲ್ಲಿಗೆ ಜನವನ್ನು ಓಡಿಸಿ ಒಂದು ಬುಟ್ಟಿಯಷ್ಟು ಮಂಜುಗಡ್ಡೆ ತರಿಸಿದರು. ನೋವು ಕಡಿಮೆಯಾಗಲೆಂದು ಅವನ್ನು ನನ್ನ ಕಾಲು ಮತ್ತು ತೊಡೆಯ ಮೇಲೆ ಇರಿಸಿದರು. ಏನು ಮಾಡಿದರೂ ನೋವು ಕಡಿಮೆಯಾಗದು, ಸಂಕಟ ಬಗೆಹರಿಯದು. ಕಾಲು ಬುರು- ಬುರು ಊದುತ್ತಲೇ ಇದೆ, ಕಡು ಭಾರವಾಗಿದೆ. ಮಡಿಸುವುದಿರಲಿ, ತುಸು ಅಲುಗಾಡಿಸಲೂ ಆಗದು. ಮೇಲೆತ್ತಲೂ, ಕೆಳಗೆ ಇಳಿಬಿಡಲೂ ಆಗದು. ಬರೀ ನರ ಹೊರಳಿಲ್ಲ, ಮೂಳೆಯೇ ಮುರಿದು ಕಾಲಿಗೆ ತೀವ್ರ ಜಖಂ ಆಗಿದೆ ಎಂಬ ತೀರ್ಮಾನಕ್ಕೆ ಎಲ್ಲರೂ ಬಂದರು. ಅಂದಿನ ನಾಟಕ ಅಲ್ಲಿಗೇ ನಿಲ್ಲಿಸಿ ಬಿಡೋಣವೆಂದೂ ನಿರ್ಧರಿಸಿದರು. ನಾನು ಮಾತ್ರ ಒಪ್ಪಲಿಲ್ಲ. ಮರು ಆಟ ಎಂದರೆ ಎಷ್ಟು ಕಷ್ಟದ, ನಷ್ಟದ ವಿಷಯ ಎಂಬುದು ನನಗೆ ಸ್ಫುಟವಾಗಿ ಗೊತ್ತಿತ್ತು. ಅಲ್ಲದೆ ಪ್ರೇಕ್ಷಕರಿಗೂ ನಿರಾಸೆ. ಹೀಗಾಗಿ ನಾಟಕ ನಿಲ್ಲಿಸುವುದು ಬೇಡವೆಂದು ಖಡಾಖಂಡಿತವಾಗಿ ಹೇಳಿದೆ. ನೋಡುಗರಿಗೆ ಪರಿಸ್ಥಿತಿಯ ಸೂಚನೆ ಕೊಟ್ಟು, ವಿರಾಮ ಅವಧಿಯನ್ನು ಸ್ವಲ್ಪ ವಿಸ್ತರಿಸಿದೆವು. ಅಲ್ಲಿಯವರೆಗೆ ನನಗೆ ವಿಶ್ರಾಂತಿ. ನಂತರ ನೋವು ನುಂಗಿಕೊಂಡು, ಅಳು ಅಡಗಿಸಿಕೊಂಡು ಮುಂದಿನ ಅಂಕಕ್ಕೆ ಅಣಿಯಾದೆ. ಆ ನಂತರ ಎಲ್ಲ ದೃಶ್ಯಗಳಲ್ಲೂ 'ಆಸನಾರೂಢ'ಳಾಗಿಯೇ ಅಭಿನಯಿಸಿದೆ! ಅಂತೂ ಇಂತೂ ಅಂದಿನ ನಾಟಕ ಮುಗಿಯಿತು. ಅಗ್ನಿ ಪರೀಕ್ಷೆಯಿಂದ ತುಸುವಾದರೂ ಬಚಾವಾಗಿದ್ದೆ.

ನಾಟಕ ಮುಗಿದ ಕೂಡಲೇ ಆಳ್ವ ಅವರು ನನ್ನನ್ನು ಡಾಕ್ಟರ ಬಳಿಗೆ ಕರೆದೊಯ್ದರು. ಕರೆಂಟ್ ಕೊಡಿಸಿದರೆ ಕಾಲಿನ ಬಿಗಿತ ಸಡಿಲಗೊಂಡು ನೋವು ಕಡಿಮೆಯಾದೀತೆಂದರು ಅವರು. ಅದಕ್ಕೂ ಕೂಡಲೇ ವ್ಯವಸ್ಥೆಯಾಯಿತು. ಆದರೂ ಏನೂ ಉಪಯೋಗವಾಗಲಿಲ್ಲ. ಕಾಲು ಸ್ವಲ್ಪವೂ ಮಡಿಸಲಾಗಲಿಲ್ಲ. ನೋವು ನಿಲ್ಲಲು ಚುಚ್ಚುಮದ್ದು ಕೊಟ್ಟು ಕಳಿಸಿದರು. ಕಂಟ್ರಾಕ್ಟ್ ಆಧಾರದ ಮೇಲೆ ಒಪ್ಪಂದವಾಗಿದ್ದರಿಂದ ನಾಟಕಗಳನ್ನು ನಿಲ್ಲಿಸುವಂತಿಲ್ಲ.



ನನ್ನ ಪಾತ್ರಗಳನ್ನು ಬೇರೆಯವರು ವಹಿಸಿ ತೂಗಿಸುವಂತಿಲ್ಲ. ಹೀಗಾಗಿ ತೈಲ, ಮುಲಾಮು, ಮಾಲೀಷ್‌ಗಳಿಗೆ ಮೊರೆಹೋದೆ. ಏನೇನು ಮಾಡಿದರೂ ಪರಿಹಾರ ದೊರಕದು. ನಾಟಕದಲ್ಲಿ ನಾನು ನಡೆದು ಅಭಿನಯಿಸಬೇಕಾದ ದೃಶ್ಯಗಳನ್ನು ಪೂರ್ತಿ ತೆಗೆದುಹಾಕುವ ನಿರ್ಧಾರವಾಯಿತು. ನಾನು ನಿಂತಿರಬೇಕು, ಇಲ್ಲವೇ ಕುರ್ಚಿಯಲ್ಲಿ ಅಲ್ಲ, ಸಿಂಹಾಸನದಲ್ಲಿ ಕೂತಿರಬೇಕು. ಹೀಗೆ ಸನ್ನಿವೇಶಗಳನ್ನು ಬದಲು ಮಾಡಲಾಯಿತು. ಮಂಗಳೂರಿನ ಕ್ಯಾಂಪು ತುಂಬಾ ಚೆನ್ನಾಗಿ ನಡೆದಿತ್ತು. ಅದಕ್ಕೆ ದೃಷ್ಟಿ ತಟ್ಟಿತೇನೋ ಎಂಬ ಹಾಗೆ ನನ್ನ ಕಾಲಿಗೆ ಬಲವಾದ ಪೆಟ್ಟೇ ಬಿದ್ದಿತ್ತು!

ಸುಮಾರು ತಿಂಗಳ ನಂತರ ಒಂದು ದಿನದ ನಾಟಕ ಪ್ರದರ್ಶನದಲ್ಲಿ ಒಂದು ಪವಾಡ ನಡೆಯಿತು. ಒಮ್ಮೆ ಜೋರಾಗಿ ಕಾಲನ್ನೆತ್ತಿ ನೆಲಕ್ಕೆ ಬಡಿಯುವ ದೃಶ್ಯ. ನಾನದನ್ನು ಮಾಮೂಲಾಗಿ ಬಲು ನಾಜೂಕಾಗಿ ಮಾಡುತ್ತಿದ್ದವಳು, ಅಂದು ನನಗೇ ಗೊತ್ತಿಲ್ಲದಂತೆ ನನ್ನೆಲ್ಲ ಶಕ್ತಿ ಕೂಡಿಸಿ ಜೋರಾಗಿ ಕಾಲು ಬಡಿದೆ. ಅದೇನಾಯಿತೋ? ಲಟಲಟನೆ ಹಲವಾರು ನೆಟಿಕೆಗಳು ಬಂದು ಬಿಟ್ಟವು. ಆಗಿನಿಂದ ನನಗೆ ಅಚ್ಚರಿಯೆಂಬಂತೆ ಕಾಲುಬಾಧೆ ಸ್ವಲ್ಪ ಕಡಿಮೆಯಾಯಿತು, ಭಾರ ಇಳಿದಂತೆನಿಸಿತು. ತುಸು ಪರಿಹಾರ ದೊರೆಯಿತು. ನಂತರದ ದಿನಗಳಲ್ಲಿ ನೋವು ಕ್ರಮೇಣ ಕಮ್ಮಿಯಾಗುತ್ತಾ ಬಂತು. ಸಂಕಟ ಬಂದಾಗಷ್ಟೇ ವೆಂಕಟರಮಣ? ನೋವು ಯಾವಾಗ ಇಳಿಯುತ್ತಾ ಬಂತೋ ನಾನು ಮತ್ತೆ ವೈದ್ಯರ ಮುಖದರ್ಶನ ಮಾಡಲೇ ಇಲ್ಲ. ಸ್ವಲ್ಪ ನೋವು, ಉಳುಕು- ಛಳುಕು, ಎಳೆತ- ಸೆಳೆತ ಉಳಿದುಕೊಂಡೇ ಇದ್ದರೂ ಮತ್ತೆ ಡಾಕ್ಟರನ್ನು ನೋಡುವ ಸಾಹಸ ಮಾಡಲಿಲ್ಲ. ನನಗೆ ಅಂದು ಬಿದ್ದ ಪೆಟ್ಟು ನನ್ನ ಜೀವಕ್ಕೇ ಅಂಟಿಬಿಟ್ಟಿದೆ. ಗಾಯ ಹಳೆಯದಾಗುತ್ತ ಬಂದಂತೆ ನೋವು ಮರುಕಳಿಸಿ ಬಂದು ಇನ್ನೂ ಈಗಲೂ ಆಗಾಗ ಕಾಟ ಕೊಡುತ್ತಲೇ ಇರುತ್ತದೆ.

ಕಲಾವಿದರಿಗೆ ಬೇರೆಯವರಂತೆ ಒಂದು ರೀತಿಯ ಖಾಸಗಿ ಬದುಕೆಂಬುದೇ ಇಲ್ಲವೇನೋ? ಸ್ವಂತದ ನೋವು- ನಲಿವು, ದುಃಖ - ದುಗುಡ, ಆಸೆ - ನಿರಾಸೆ ಏನೇ ಇರಲಿ, ಅದನ್ನು ಜನರೆದುರು ಬಹಿರಂಗವಾಗಿ ತೋಡಿಕೊಳ್ಳುವಂತಿಲ್ಲ. ಮೂಕವಾಗಿ ಅನುಭವಿಸಬೇಕು. ಆದರೂ ನಗು ಮುಖದಿಂದಲೇ ಇರಬೇಕು. ಜಡ್ಡು - ಜ್ವರ ಇದ್ದರೂ ರಜ ಹಾಕುವಂತಿಲ್ಲ; ಜಾಹೀರು ಮಾಡುವಂತೆಯೂ ಇಲ್ಲ. ಅದೇನಾದರೂ ಪ್ರಚಾರವಾಗಿ ಬಿಟ್ಟರೆ, ಮುಂದಿನ ಅವಕಾಶಗಳಿಗೇ ಖೋತಾ ಬಿದ್ದೀತು. ಒಮ್ಮೆ ಹೀಗೇನಾದರೂ ಆದಾಗ ಬೇರೆ ಯಾರಾದರೂ ಕೊಕ್ ಕೊಟ್ಟು ನಮ್ಮ ಜಾಗಕ್ಕೆ ಬಂದು ಬಿಟ್ಟರೆಂದರೆ, ಅದೇ ನಮ್ಮ ಪಾಲಿಗೆ ಖಾಯಂ ಕಿಕ್ ಆಗಿಬಿಡಬಹುದು! ಇನ್ನು ನಗೆನಟರ ಪಾಡೋ? ಅಳುವಿನ ಭಂಡಾರವೇ ಎದೆಯ

ಗೂಡೊಳಗಿದ್ದರೂ ಅದನ್ನು ಗೂಢವಾಗಿಸಿರಿಕೊಂಡು ಏನೂ ಆಗಿಲ್ಲವೇನೋ ಎಂಬಂತೆ ಬಂದು ರಂಗದ ಮೇಲೆ ನಟಿಸಬೇಕು, ನಗೆ ಬಾಂಬು ಸಿಡಿಸಬೇಕು! ನಗಬೇಕು- ನಗಿಸಬೇಕು. ಅದು ಕಲಾವಿದರ ಧರ್ಮ. ವಿರೋಧಾಭಾಸವೆನಿಸಿದರೂ ಅದೇ ಅವರಿಗೆ ಅನಿವಾರ್ಯ ಕರ್ಮ.

ಮಂಗಳೂರಿನಿಂದ ವಾಪಸ್ಸು ಬರುತ್ತಾ ಸಕಲೇಶಪುರದಲ್ಲಿ 'ಸಂಸಾರ ನೌಕ' ಆಡಿದೆವು. ಹಚ್ಚ ಹಸಿರಿನ ಆ ಊರಿನಲ್ಲಿ ಹೆಸರು ಚೆನ್ನಾಗಿ ಬಂತು, ಸಾಕಷ್ಟು ಕಾಸೂ ಕಂಡೆವು. ಹೀಗಾಗಿ ಅಲ್ಲಿನ ನೆನಪು ನನಗೆ ಸದಾ ಹಸಿರು.

•

## ಕಲ್ಲಾದೆ, ಕಷ್ಟಗಳ ಮಳೆ ಸುರಿಯೆ

ಕಂಪನಿ ನಡೆಸುವುದೆಂದರೆ ಕಷ್ಟ ಕೋಟಲೆಯ ಮೂಟೆಯನ್ನೇ ಮೈ - ಕೈ ಮೇಲೆ ಕೆಡವಿಕೊಂಡಂತೆ. ಇದಕ್ಕೆ ದೃಷ್ಟಾಂತವಾಗಿ ನನಗೆ ಒಂದಲ್ಲ, ಹತ್ತು - ಹಲವು ಕಹಿ ಅನುಭವಗಳಾದವು. ಅದರಲ್ಲೂ ಹೆಂಗಸರ ಗುಂಪನ್ನೇ ಕಟ್ಟಿಕೊಂಡು ಕಂಪನಿ ಮಾಡುವುದು ಕ್ಯಾಂಪು ಹೂಡುವುದು, ನಾಟಕವಾಡುವುದೆಂದರೆ ಇನ್ನೂ ಕಠಿಣ ಪರೀಕ್ಷೆಯೇ, ಕಡು ಸಾಹಸವೇ. ಈಗಿರುವ ಸೌಲಭ್ಯ- ಸವಲತ್ತು - ಸುರಕ್ಷತೆ ಯಾವುದೊಂದೂ ಇಲ್ಲದಿದ್ದ ಆ ೬೦-೭೦ರ ದಶಕದಲ್ಲಿ ನಮ್ಮ ಸ್ಥಿತಿ ಹೇಗಿರಬೇಕು? ನೀವೇ ಊಹಿಸಿ.

ನಮ್ಮಲ್ಲಿ ಕೆಲ ಕಲಾವಿದೆಯರಾದರೋ ಸದಾ ನಮ್ಮೊಂದಿಗೇ ಕಂಪನಿ ಬೀಡುಬಿಟ್ಟೆಡೆಯಲ್ಲೆಲ್ಲಾ, ಒಟ್ಟಿಗೆ ಇರುವಂಥವರು. ಊಟ - ವಸತಿ- ನಾಟಕಗಳೆಲ್ಲಾ ಒಟ್ಟೊಟ್ಟಿಗೇ. ಹಾಗೆ ಬಿಡಾರದಲ್ಲಿರುತ್ತಿದ್ದ ನಟಿಯರ ಪೂರ್ತಿ ಜವಾಬ್ದಾರಿ ನನ್ನದೇ. ಅವರ ತಂದೆ - ತಾಯಿ - ನೆಂಟರೆಲ್ಲ ನನ್ನ ಮೇಲೆ ತುಂಬಾ ನಂಬಿಕೆಯಿಟ್ಟು ಬಿಟ್ಟು ಹೋಗಿರುತ್ತಿದ್ದರು. ಸರ್ವೇಸಾಮಾನ್ಯವಾಗಿ ಎಲ್ಲರೂ ಹದಿಹರೆಯದವರು. ನಾಟಕದವರಾದ್ದರಿಂದ ಸಾಕಷ್ಟು ಸುಂದರಿಯರು. ಸಹಜವಾಗಿ ಸೂಜಿಗಲ್ಲಿನಂತಹ ವ್ಯಕ್ತಿತ್ವದವರು. ಹೀಗಾಗಿ ಊರಿನವರ ಕಣ್ಣು- ಕಿವಿ - ಕುತೂಹಲಕ್ಕೆ ಸದಾ ಗುರಿಯಾದವರು. ಎಷ್ಟೋ ಮಂದಿಯ ಕಣ್ಣುರಿಗೂ ಕಾರಣರಾಗಿದ್ದವರು. ಕೆಲ ಊರುಗಳಲ್ಲಿ ಪುಂಡು ಪೋಕರಿಗಳ, ಪಡ್ಡೆ ಹುಡುಗರ, ಪೋಲಿ ಪಟಿಂಗರ ಕೀಟಲೆ, ಕಾಟ, ತಂಟೆಯೂ ಇರುತ್ತಿತ್ತು. ಅವರ ಅಣಕು - ಕೆಣಕು ಇದ್ದೇ ಇರುತ್ತಿತ್ತು. ಆದ್ದರಿಂದ ಅವರನ್ನು ಕಾಯಲು ನಾನು ಸದಾ ಮೈಯೆಲ್ಲಾ ಕಣ್ಣಾಗಿರಬೇಕಾಗಿತ್ತು. ಇಷ್ಟಾದರೂ ಎಲ್ಲರೂ ಒಟ್ಟಿಗಿರುತ್ತಿದ್ದರಿಂದ ಅವರಿಗೆ ರಕ್ಷಣೆ ಇರುತ್ತಿತ್ತು. ಅಲ್ಲದೆ ಕಂಪನಿಗೂ ಅನುಕೂಲವಿತ್ತು. ಅವರು ಯಾರೂ, ಯಾವತ್ತೂ ನಾಟಕಕ್ಕೆ ಹೇಳದೆ- ಕೇಳದೆ ಚಕ್ಕರ್ ಹಾಕುವ ಭಯ, ಅಪಾಯವಿರುತ್ತಿರಲಿಲ್ಲ. ತರಬೇತಿಗೆ, ತಾಲೀಮಿಗೆ ಸಕಾಲಕ್ಕೆ ಬರುವರು. ಯಾವುದೇ ಸಬೂಬು ಹೇಳಲೂ ಅವರಿಗೆ ಅವಕಾಶವಿರದು. ಅವರ ಆಗು ಹೋಗುಗಳೆಲ್ಲ ನಮಗೆ ಚೆನ್ನಾಗಿ ಗೊತ್ತಿರುತ್ತಿತ್ತು.

ಗೂಡೊಳಗಿದ್ದರೂ ಅದನ್ನು ಗೂಢವಾಗಿಸಿರಿಕೊಂಡು ಏನೂ ಆಗಿಲ್ಲವೇನೋ ಎಂಬಂತೆ ಬಂದು ರಂಗದ ಮೇಲೆ ನಟಿಸಬೇಕು, ನಗೆ ಬಾಂಬು ಸಿಡಿಸಬೇಕು! ನಗಬೇಕು- ನಗಿಸಬೇಕು. ಅದು ಕಲಾವಿದರ ಧರ್ಮ. ವಿರೋಧಾಭಾಸವೆನಿಸಿದರೂ ಅದೇ ಅವರಿಗೆ ಅನಿವಾರ್ಯ ಕರ್ಮ.

ಮಂಗಳೂರಿನಿಂದ ವಾಪಸ್ಸು ಬರುತ್ತಾ ಸಕಲೇಶಪುರದಲ್ಲಿ 'ಸಂಸಾರ ನೌಕ' ಆಡಿದೆವು. ಹಚ್ಚ ಹಸಿರಿನ ಆ ಊರಿನಲ್ಲಿ ಹೆಸರು ಚೆನ್ನಾಗಿ ಬಂತು, ಸಾಕಷ್ಟು ಕಾಸೂ ಕಂಡೆವು. ಹೀಗಾಗಿ ಅಲ್ಲಿನ ನೆನಪು ನನಗೆ ಸದಾ ಹಸಿರು.

## ಕಲ್ಲಾದೆ, ಕಷ್ಟಗಳ ಮಳೆ ಸುರಿಯೆ

ಕಂಪನಿ ನಡೆಸುವುದೆಂದರೆ ಕಷ್ಟ ಕೋಟಲೆಯ ಮೂಟೆಯನ್ನೇ ಮೈ - ಕೈ ಮೇಲೆ ಕೆಡವಿಕೊಂಡಂತೆ. ಇದಕ್ಕೆ ದೃಷ್ಟಾಂತವಾಗಿ ನನಗೆ ಒಂದಲ್ಲ, ಹತ್ತು - ಹಲವು ಕಹಿ ಅನುಭವಗಳಾದವು. ಅದರಲ್ಲೂ ಹೆಂಗಸರ ಗುಂಪನ್ನೇ ಕಟ್ಟಿಕೊಂಡು ಕಂಪನಿ ಮಾಡುವುದು ಕ್ಯಾಂಪು ಹೂಡುವುದು, ನಾಟಕವಾಡುವುದೆಂದರೆ ಇನ್ನೂ ಕಠಿಣ ಪರೀಕ್ಷೆಯೇ, ಕಡು ಸಾಹಸವೇ. ಈಗಿರುವ ಸೌಲಭ್ಯ- ಸವಲತ್ತು - ಸುರಕ್ಷತೆ ಯಾವುದೊಂದೂ ಇಲ್ಲದಿದ್ದ ಆ ೬೦-೭೦ರ ದಶಕದಲ್ಲಿ ನಮ್ಮ ಸ್ಥಿತಿ ಹೇಗಿರಬೇಕು? ನೀವೇ ಊಹಿಸಿ.

ನಮ್ಮಲ್ಲಿ ಕೆಲ ಕಲಾವಿದೆಯರಾದರೋ ಸದಾ ನಮ್ಮೊಂದಿಗೇ ಕಂಪನಿ ಬೀಡುಬಿಟ್ಟೆಡೆಯಲ್ಲೆಲ್ಲಾ, ಒಟ್ಟಿಗೆ ಇರುವಂಥವರು. ಊಟ - ವಸತಿ- ನಾಟಕಗಳೆಲ್ಲಾ ಒಟ್ಟೊಟ್ಟಿಗೇ. ಹಾಗೆ ಬಿಡಾರದಲ್ಲಿರುತ್ತಿದ್ದ ನಟಿಯರ ಪೂರ್ತಿ ಜವಾಬ್ದಾರಿ ನನ್ನದೇ. ಅವರ ತಂದೆ - ತಾಯಿ - ನೆಂಟರೆಲ್ಲ ನನ್ನ ಮೇಲೆ ತುಂಬಾ ನಂಬಿಕೆಯಿಟ್ಟು ಬಿಟ್ಟು ಹೋಗಿರುತ್ತಿದ್ದರು. ಸರ್ವೇಸಾಮಾನ್ಯವಾಗಿ ಎಲ್ಲರೂ ಹದಿಹರೆಯದವರು. ನಾಟಕದವರಾದ್ದರಿಂದ ಸಾಕಷ್ಟು ಸುಂದರಿಯರು. ಸಹಜವಾಗಿ ಸೂಜಿಗಲ್ಲಿನಂತಹ ವ್ಯಕ್ತಿತ್ವದವರು. ಹೀಗಾಗಿ ಊರಿನವರ ಕಣ್ಣು- ಕಿವಿ - ಕುತೂಹಲಕ್ಕೆ ಸದಾ ಗುರಿಯಾದವರು. ಎಷ್ಟೋ ಮಂದಿಯ ಕಣ್ಣುರಿಗೂ ಕಾರಣರಾಗಿದ್ದವರು. ಕೆಲ ಊರುಗಳಲ್ಲಿ ಪುಂಡು ಪೋಕರಿಗಳ, ಪಡ್ಡೆ ಹುಡುಗರ, ಪೋಲಿ ಪಟಿಂಗರ ಕೀಟಲೆ, ಕಾಟ, ತಂಟೆಯೂ ಇರುತ್ತಿತ್ತು. ಅವರ ಅಣಕು - ಕೆಣಕು ಇದ್ದೇ ಇರುತ್ತಿತ್ತು. ಆದ್ದರಿಂದ ಅವರನ್ನು ಕಾಯಲು ನಾನು ಸದಾ ಮೈಯೆಲ್ಲಾ ಕಣ್ಣಾಗಿರಬೇಕಾಗಿತ್ತು. ಇಷ್ಟಾದರೂ ಎಲ್ಲರೂ ಒಟ್ಟಿಗಿರುತ್ತಿದ್ದರಿಂದ ಅವರಿಗೆ ರಕ್ಷಣೆ ಇರುತ್ತಿತ್ತು. ಅಲ್ಲದೆ ಕಂಪನಿಗೂ ಅನುಕೂಲವಿತ್ತು. ಅವರು ಯಾರೂ, ಯಾವತ್ತೂ ನಾಟಕಕ್ಕೆ ಹೇಳದೆ- ಕೇಳದೆ ಚಕ್ಕರ್ ಹಾಕುವ ಭಯ, ಅಪಾಯವಿರುತ್ತಿರಲಿಲ್ಲ. ತರಬೇತಿಗೆ, ತಾಲೀಮಿಗೆ ಸಕಾಲಕ್ಕೆ ಬರುವರು. ಯಾವುದೇ ಸಬೂಬು ಹೇಳಲೂ ಅವರಿಗೆ ಅವಕಾಶವಿರದು. ಅವರ ಆಗು ಹೋಗುಗಳೆಲ್ಲ ನಮಗೆ ಚೆನ್ನಾಗಿ ಗೊತ್ತಿರುತ್ತಿತ್ತು.

ಬೇರೆ ಹಲವು ಕಲಾವಿದೆಯರ ಸಂಗತಿ ಹೀಗಲ್ಲ. ನಾವು ಕರೆ ಕಳಿಸಿದಾಗ ಮಾತ್ರ ತಮ್ಮ ಮನೆಯಿಂದಲೋ - ಊರಿನಿಂದಲೋ ನಾಟಕಕ್ಕಾಗಿ ಬಂದು, ಅದು ಮುಗಿದ ಕೂಡಲೇ ವಾಪಸ್ಸು ಹೊರಟು ಬಿಡುತ್ತಿದ್ದರು. ಅವರ ಕುರಿತಾದ ಜವಾಬ್ದಾರಿ ಏನಿದ್ದರೂ ಅವರು ಮರಳಿ ಮನೆಗೆ ತಲುಪುವವರೆಗೆ ಮಾತ್ರ. ಇಲ್ಲವೇ ಬಸ್ಸಿನಲ್ಲೋ, ರೈಲಿನಲ್ಲೋ ಕೂಡಿಸಿ ಕಳಿಸಿಕೊಡುವವರೆಗೆ ಅಷ್ಟೇ. ಇಲ್ಲೊಂದು ತೊಡಕು, ತಾಪತ್ರಯ ಎದುರಾಗುತ್ತಿತ್ತು. ಬೇರೆ ಕಂಪನಿಯವರೂ ಅವರನ್ನು ಸಂಪರ್ಕಿಸಿ ತಮ್ಮ ನಾಟಕಗಳಿಗೆ ಕರೆ ಕಳಿಸುತ್ತಿದ್ದರು. ಅವರಿಗೆ ಆಸೆ, ಆಮಿಷ ತೋರಿಸುತ್ತಿದ್ದರು. ಅಲ್ಲೇನಾದರೂ ಹೆಚ್ಚು ದುಡ್ಡು ಗಿಟ್ಟುವಂತಿದ್ದರೆ ಅವರು ನಮಗೆ ಕೈ ಕೊಡುತ್ತಿದ್ದುದು ಮಾಮೂಲು. ಅಷ್ಟೇ ಅಲ್ಲದೆ, ಬೇರೆ ಯಾವುದೋ ಕೆಲಸಕ್ಕೋ, ಊರುಗಳಿಗೋ, ಹೇಳದೆ - ಕೇಳದೆ ಹೊರಟು ಬಿಡುತ್ತಿದ್ದುದೂ ಉಂಟು. ಹೀಗಾಗಿ ಅವರು ನಮ್ಮಲ್ಲಿಗೆ ಪ್ರದರ್ಶನದ ವೇಳೆಗೆ ಬರುವವರೆಗೂ ನಮಗೆ ಯಾವುದೇ ಖಾತ್ರಿ ಇರುತ್ತಿರಲಿಲ್ಲ. ಆತಂಕ ತಪ್ಪುತ್ತಿರಲಿಲ್ಲ.

ಒಂದು ಸಾರಿ ನನಗೆ ಚೆನ್ನಾಗಿಯೇ ಚುರುಕು ಮುಟ್ಟಿತು. ಶಿವಮೊಗ್ಗ ನನಗೆ ತವರು ಮನೆ ಇದ್ದಹಾಗೆ. ಅಷ್ಟು ಆಪ್ತ, ಆತ್ಮೀಯ, ಆಪ್ಯಾಯಮಾನವಾದದ್ದು. ಅಲ್ಲಿ ಹಿಂದೆ ನಮ್ಮ ನಾಟಕಗಳು ಜಯಭೇರಿ ಬಾರಿಸಿದ್ದವು.ಅಲ್ಲಿನ ಜನ ನಮ್ಮನ್ನು ತುಂಬಾ ವಿಶ್ವಾಸದಿಂದ ಆದರಿಸಿದ್ದರು. ಈ ಸವಿನೆನಪಿನ ಬಲದಿಂದ ಮತ್ತೆ ಅಲ್ಲಿ ಕ್ಯಾಂಪ್ ಹಾಕಲು ನಿರ್ಧರಿಸಿದೆ. ಎಲ್ಲ ಏರ್ಪಾಟನ್ನೂ ಮಾಡಿದೆ. ಅಲ್ಲಿ ಗೊತ್ತಾಗಿದ್ದ ನಾಟಕಕ್ಕೆ ಮೂರು ಮುಖ್ಯ ಪಾತ್ರಧಾರಿ ನಟಿಯರು ಬೇರೆ ಬೇರೆ ಊರಿನಿಂದ ಬರಬೇಕಾಗಿತ್ತು. ಅವರಿಗೆ ಕರೆ ಕಳುಹಿಸಿದ್ದೆ. ಬರುವುದಾಗಿ ಉತ್ತರವನ್ನೂ ಕೊಟ್ಟಿದ್ದರು. ಆದರೆ ಅದೇನು ಕಾರಣವೋ, ನಾಟಕದ ಹಿಂದಿನ ದಿನವಿರಲಿ, ನಾಟಕದ ದಿನದ ಬೆಳಿಗ್ಗೆಯೂ ಅವರ ದರ್ಶನವೇ ಇಲ್ಲ. ಒಂದು ಪಾತ್ರಕ್ಕೆ ಸಹಾ ಕೊನೆಗಳಿಗೆಯಲ್ಲಿ ನಟರನ್ನು ಹೊಂದಿಸುವುದು ಕಷ್ಟ. ಅಂಥದರಲ್ಲಿ ಮೂರು ಮುಖ್ಯ ಪಾತ್ರಗಳಿಗೆ? ನನಗೆ ದಿಕ್ಕೇ ತೋರಲಿಲ್ಲ. ತಲೆಗಿರ್ರೆಂದು ತಿರುಗತೊಡಗಿತು. ನಾಟಕ ಕುಲಗೆಟ್ಟು ನನಗೂ ಕೆಟ್ಟ ಹೆಸರು ಬರುವುದೇ ಗಟ್ಟಿ ಎಂದು ಎದೆ ಡವಗುಟ್ಟಿತು.

ಆದರೂ ಇದ್ದ ಬದ್ದ ಧೈರ್ಯವನ್ನೆಲ್ಲಾ ಒಟ್ಟುಗೂಡಿಸಿಕೊಂಡೆ. ಅದೇ ನಾಟಕದ ಬೇರೆ ಸಣ್ಣ ಪುಟ್ಟ ಪಾತ್ರಗಳ ಕಲಾವಿದರನ್ನೂ, ನಾಟಕ ಮಂಡಲಿಯ ಬೇರೆ ಕೆಲಸಗಾರರನ್ನೂ ಕಲೆ ಹಾಕಿದೆ. ಕೆಲ ಹೊಸಬರಿಗೂ ಪಾತ್ರಗಳನ್ನು ಕೊಟ್ಟೆ. ಕೆಲವರಿಗೆ ಹಿರಿಯ ಪಾತ್ರಗಳಿಗೆ ಪ್ರಮೋಷನ್ ಕೊಟ್ಟೆ. ಇನ್ನೂ ಕೆಲವರಿಗೆ ಡಬಲ್ ಪಾತ್ರಗಳನ್ನೂ ಹಂಚಿದೆ. ಅವರನ್ನು ಹುರಿದುಂಬಿಸಿ, ಪುಸಲಾಯಿಸಿ ಆ ಪಾತ್ರಗಳನ್ನು ಮಾಡುವಂತೆ ಒಪ್ಪಿಸಿದೆ. ಸಾಕಷ್ಟು ತಯಾರಿಯನ್ನೂ ಕೊಟ್ಟೆ- ಕೊಡಿಸಿದೆ. ಒಳ್ಳೇ ಕಸರತ್ತೇ ಆಗಿಬಿಟ್ಟಿತು. ಗಳಿಗೆ - ಗಳಿಗೆಯೂ ಕಾತುರ, ಕಳವಳ. ಹಾಗೂ ಹೀಗೂ ಮಾಡಿ ಅವರನ್ನ ರಂಗದ ಮೇಲೆ ತಂದು ನಿಲ್ಲಿಸಿ,



ನಾಟಕ ನಿಲ್ಲದ ಹಾಗೆ - ಕೆಡದ ಹಾಗೆ ನೋಡಿಕೊಂಡೆ. ನನ್ನ ಪುಣ್ಯ ಚೆನ್ನಾಗಿತ್ತು. ಎಲ್ಲ ನಟಿಯರೂ ತಮ್ಮ ಹೊಸ ಪಾತ್ರಗಳಲ್ಲಿ ಸಾಕಷ್ಟು ಚೆನ್ನಾಗಿಯೇ ಅಭಿನಯಿಸಿದರು. ನನ್ನ ಮಾನ ಉಳಿಸಿದರು. ನನಗೆ ಮರ್ಯಾದೆ ತಂದರು. ಅಲ್ಲದೆ ನನ್ನ ಆತ್ಮವಿಶ್ವಾಸವನ್ನು ಹೆಚ್ಚಿಸಿದರು. ಮುಂದೆಯೂ ಆಗಾಗ ಇಂಥದೇ 'ನಾಟಕದ ಹೊರಗಿನ ನಾಟಕಗಳು, ತೆರೆಮರೆಯ ಆಟಗಳು' ಸಾಕಷ್ಟು ಏರ್ಪಟ್ಟವು. ನಾಟಕದ ಕಂಪನಿಯಲ್ಲಿ 'ಸರ್ಕಸ್' ಸಹಾ ಆಗಾಗ ನಡೆಯುತ್ತಿತ್ತು!

ಕಂಪನಿ- ಕಲಾವಿದರ ಸಂಬಂಧಕ್ಕೂ, ತಾಯಿ- ಕಂದನ ಅನುಬಂಧಕ್ಕೂ ಎಳ್ಳಷ್ಟೂ ಭೇದವಿರುವುದಿಲ್ಲ. ಇಬ್ಬರಲ್ಲಿ ಯಾರಿಗೆ ತೊಂದರೆಯಾದರೂ ಇನ್ನೊಬ್ಬರಿಗೆ ತಾಪತ್ರಯ. ಹೀಗಾಗಿ ಸಿಹಿ - ಕಹಿಯಲ್ಲಿ ಇಬ್ಬರಿಗೂ ಸಮಪಾಲು. ಒಳ್ಳೆ ಕಲಾವಿದರಿಂದ ಕಂಪನಿಗೆ ಹಿರಿಮೆ- ಹೆಮ್ಮೆ. ಒಳ್ಳೆ ಕಂಪನಿಯಿಂದ ಕಲಾವಿದರಿಗೆ ಗರಿಮೆ- ಗಳಿಕೆ. ಇದನ್ನು ಚೆನ್ನಾಗಿ ತಿಳಿದು ನಡೆದಷ್ಟೂ ಇಬ್ಬರಿಗೂ ಒಳ್ಳೆಯದು. ಕಲಾವಿದರಿಗೆ ಕಂಪನಿಯ ಒಳಗಾಗಲಿ- ಹೊರಗಾಗಲಿ, ಸ್ವಂತ ಬದುಕಿನಲ್ಲಾಗಲಿ ಏನು ತೊಡಕು ಉಂಟಾದರೂ ಕೂಡ ಅದರ ಪರಿಣಾಮ ನೇರವಾಗಿ ಕಂಪನಿಯ ಮೇಲೇ ಆಗುತ್ತದೆ. ಹೀಗಾಗಿ ಕಲಾವಿದರಿಗೆ ಏನಾದರೆ ನನಗೇನು ಎಂದು ಕಂಪನಿಯ ಧಣಿ ಕಣ್ಣು ಮುಚ್ಚಿ ಕೂಡುವಂತಿಲ್ಲ. ನನ್ನ ಕಂಪನಿ ನಿರ್ವಹಣೆಯ ಅವಧಿಯಲ್ಲಿ ಕಲಾವಿದರ ಕುರಿತು ಅನೇಕ ಸಂಕಷ್ಟಗಳನ್ನೂ - ಧರ್ಮಸಂಕಟಗಳನ್ನೂ ಎದುರಿಸಿದೆ.

ಒಮ್ಮೆ ಶಿವಮೊಗ್ಗದಲ್ಲಿ 'ದೇವದಾಸಿ' ನಾಟಕ. ಎಲ್ಲ ಸಿದ್ಧತೆಯೂ ನಡೆದಿದೆ. ಬೆಳಿಗ್ಗೆ ರಂಗ ತಾಲೀಮೂ ಆಗಿತ್ತು. ಸಂಜೆ ನಾಟಕಶಾಲೆಗೆಂದು ಆ ನಾಟಕದ ಮಣಿಮಂಜರಿ ಪಾತ್ರದ ಕಲಾವತಿ ತನ್ನ ಮನೆಯಿಂದ ಹೊರಟು ರಸ್ತೆಯಲ್ಲಿ ನಡೆದು ಬರುತ್ತಿದ್ದಾಳೆ. ಅದೇ ರಸ್ತೆಯಲ್ಲಿ ಎತ್ತಿನ ಗಾಡಿಯೊಂದು ಬರುತ್ತಿದೆ. ಅದರ ಹಿಂದಿನಿಂದ ಬಸ್ಸೊಂದು ವೇಗವಾಗಿ ಬರುತ್ತಿದೆ. ತನಗೆ ದಾರಿ ಬಿಡಲೆಂದು ಬಸ್ಸಿನ ಚಾಲಕ ಜೋರಾಗಿ ಹಾರ್ನ್ ಬಾರಿಸಿದ್ದಾನೆ. ಆ ಗದ್ದಲದ ಸದ್ದಿಗೆ ಹೆದರಿ- ಬೆದರಿದ ಗಾಡಿಯ ಎತ್ತುಗಳು ರಸ್ತೆಯ ಆ ಬದಿಯಿಂದ ಈ ಬದಿಗೆ ಯದ್ವಾತದ್ವಾ ಓಡಲಾರಂಭಿಸಿವೆ. ಹಾಗೆ ಓಡುವ ರಭಸದಲ್ಲಿ ರಸ್ತೆ ತುದಿಗೆ ಬರುತ್ತಿದ್ದ ಕಲಾವತಿಗೆ ಹಿಂಬದಿಯಿಂದ ಗುದ್ದಿ ಅವಳನ್ನು ಕೆಳಗೆ ಕೆಡವಿ ಉರುಳಿಸಿವೆ. ತಾವೋ ವಿರುದ್ಧ ದಿಕ್ಕಿಗೆ ಓಡಿಹೋಗಿ ಬಚಾವಾದವು. ಬಸ್ಸೂ ನಿಲ್ಲದೆ ದೌಡಾಯಿಸಿತು. ಆದರೆ ಅಪಾಯದ ದವಡೆಗೆ ಸಿಲುಕಿಕೊಂಡವಳು ಬಡಪಾಯಿ ಕಲಾವತಿ ಮಾತ್ರ!

ನನಗೆ ಸುದ್ದಿ ಬಂತು. ನಾಟಕದ ಸಿದ್ಧತೆ ಅಲ್ಲಿಗೇ ನಿಲ್ಲಿಸಿ ಎಲ್ಲರೂ ಧಾವಿಸಿದೆವು. ನೋಡಿದರೆ ಅವಳ ಮೈಗೆ ತೀವ್ರ ಪೆಟ್ಟಾಗಿ ಕೈಗೆ ಭಾರಿ ಏಟಾಗಿದೆ. ಆದ ಗಾಯದಿಂದ ರಕ್ತ

ಜೋರಾಗಿ ತೊಟ್ಟಿಕ್ಕುತ್ತಿದೆ. ಮನಸ್ಸಿಗೂ ಆಘಾತವಾಗಿದೆ. ನೋವಿನಿಂದ ಆಕೆ ಗೋಳೋ ಎಂದು ಅಳುತ್ತಿದ್ದಾಳೆ. ಅವಳನ್ನು ಎತ್ತಿ ಎಬ್ಬಿಸಿದರೆ ನಿಲ್ಲಲಾರಳು. ಕೂಡಲೇ ಗಾಡಿಯೊಂದನ್ನು ಕಟ್ಟಿಸಿಕೊಂಡು ಅವಳನ್ನು ಶಿವಮೊಗ್ಗ ಆಸ್ಪತ್ರೆಗೆ ಒಯ್ದೆವು. ಅಲ್ಲಿ ಪ್ರಥಮಚಿಕಿತ್ಸೆ- ಆರೈಕೆ ಆಯಿತು. ಮೂಳೆಗೆ ಪೆಟ್ಟಾಗಿ ಮುರಿದಿರಬಹುದೆಂದು ಅಂದಾಜು ಮಾಡಿದರು ಡಾಕ್ಟರು. ಮುಂದಿನ ಚಿಕಿತ್ಸೆಗಾಗಿ ಮೈಸೂರಿನ ದೊಡ್ಡಾಸ್ಪತ್ರೆಗೆ ಸೇರಿಸುವುದೇ ವಿಹಿತ ಎಂದರು. ಅಲ್ಲಿಗೇ ಮೋಟಾರುಗಾಡಿಯಲ್ಲಿ ಹೋಗಿ ಸೇರಿಸಿದ್ದಾಯಿತು. ಪ್ಲಾಸ್ಟರ್ - ಪಟ್ಟು ಹಾಕಿದರು. ಪಟ್ಟಿ ಕಟ್ಟಿದರು. ನಂತರ ಮೂಳೆ ಮುರಿತಕ್ಕೆ ಶಸ್ತ್ರಕ್ರಿಯೆಯೂ ಆಯಿತು. ತಿಂಗಳಾನುಗಟ್ಟಲೆ ಚಿಕಿತ್ಸೆ, ಶೂಶ್ರೂಷೆ ನಡೆಯಿತು. ಆದರೂ ವಿಧಿಯ ಆಟವೇ ಕ್ರೂರವಾಗಿತ್ತು, ಕಠೋರವಾಗಿತ್ತು. ಆಕೆಯ ಕೈ ನೆಟ್ಟಗಾಗಲೇ ಇಲ್ಲ. ಆ ಸಂದರ್ಭದಲ್ಲಿ ನನಗಾದ ಯಾತನೆ- ತೊಂದರೆ, ಖರ್ಚು- ವೆಚ್ಚ ವಿಪರೀತವೇ. ಹೀಗಿದ್ದರೂ ಅವಳ ಕೈ ಸರಿಹೋಗಿದ್ದರೆ ನನಗೆಷ್ಟೋ ನೆಮ್ಮದಿಯಿರುತ್ತಿತ್ತು. ಇಷ್ಟೆಲ್ಲ ಆದರೂ ಆಕೆ ಹೊಟ್ಟೆ ಪಾಡಿಗಾಗಿ ನಾಟಕ ಮಾತ್ರ ಬಿಡುವಂತಿಲ್ಲ. ಹಲವಾರು ವರ್ಷ ಸೊಟ್ಟ ಕೈ ಮುಚ್ಚುವಂಥ ಬಟ್ಟೆಯನ್ನು ಧರಿಸಿಯೇ ನಾಟಕಗಳನ್ನಾಡಿದಳು. ಈಗಲೂ ಅವಳನ್ನು ನೋಡಿದಾಗೆಲ್ಲ ಕರುಳು ಕಿವುಚುತ್ತದೆ. ಈ ತೆರನಾದದ್ದು ಕಂಪನಿ ಮಾಲಿಕರ - ಕಲಾವಿದರ ಸಂಬಂಧ, ಅನುಬಂಧ.

ನಾಟಕ ಕಂಪನಿಗಳ ಸಮಸ್ಯೆಗಳು ನೂರಾರು. ಮಹಿಳಾ ನಟಿಯರನ್ನೇ ಕಟ್ಟಿಕೊಂಡ ಕಂಪನಿ ಎಂದ ಮೇಲೆ ಅದರ ಕಷ್ಟಕೋಟಲೆಗಳು ಇನ್ನೊಂದಷ್ಟು ಪಟ್ಟು ಜಾಸ್ತಿ. ಹದಿಹರೆಯದ ಸುಂದರ ತರುಣಿಯರ ವೃಂದವನ್ನೇ ಊರಿಂದೂರಿಗೆ ಕರೆದೊಯ್ಯುವುದು, ಅವರ ಸಂರಕ್ಷಣೆಯ ಭಾರ- ಹೊಣೆ ಹೊರುವುದು, ನಿಜಕ್ಕೂ ಹರಸಾಹಸವೇ ಸರಿ. ನಾನು ಸಾಕಷ್ಟು ಧೈರ್ಯಶಾಲಿಯಾದ್ದರಿಂದಲೇ ಹಲವಾರು ಕಹಿ ಘಟನೆಗಳು, ಕಠಿಣ ಪ್ರಸಂಗಗಳು, ಎಡವಟ್ಟುಗಳನ್ನು ಎದುರಿಸಿಯೂ ಎದೆಗುಂದದೆ ಇದ್ದೆ. ಒಮ್ಮೆಯಂತೂ ನನ್ನ ಸಹನೆ, ಸಾಮರ್ಥ್ಯಗಳನ್ನೇ ಕೆಣಕುವ, ಅಣಕಿಸುವ ಪ್ರಸಂಗ ನಡೆಯಿತು. ಆ ಅನುಭವ ನಿಜಕ್ಕೂ ಕಟು, ಕಠೋರ.

ಹಿರಿಯೂರು ಕ್ಯಾಂಪಿನಲ್ಲಿ ಪೌರಾಣಿಕ ನಾಟಕಗಳೆಲ್ಲವೂ ಮುಗಿದಿದ್ದವು. ಮಾಮೂಲಿನಂತೆ ಸಾಮಾಜಿಕಗಳನ್ನು ಕೊನೆಗೆ ಇಟ್ಟುಕೊಂಡಿದ್ದೆವು. 'ಸಂಸಾರ ನೌಕ' ಆಡಲು ತಯಾರಿ- ತಾಲೀಮು ಬಿರುಸಿನಲ್ಲಿತ್ತು. ಅದರ ಮುಖ್ಯ ನಟಿ ಕಲಾವತಿಗೆ ಆದಾಗಲೇ ಮದುವೆಯಾಗಿತ್ತು. ನಾಟಕದ ದಿನಗಳಲ್ಲಿ ಅವಳು ತನ್ನ ಗಂಡ ಸೀತಾ ರಾಮಯ್ಯನೊಡನೆಯೇ ಟೆಂಟಿಗೆ ಬಂದು - ಹೋಗಿ ಮಾಡುತ್ತಿದ್ದಳು. ಆತನೂ ಕಂಪನಿಯಲ್ಲಿ ಟಿಕೆಟ್ ಕೊಡುವುದೇ ಮೊದಲಾದ ಕೆಲಸ ಮಾಡಿಕೊಂಡಿದ್ದರು. ಒಂದು ದಿನ ಪ್ರಾಕ್ಟೀಸು ಮುಗಿಸಿಕೊಂಡು ಆಕೆ ಗಂಡನೊಡನೆ ಮನೆಗೆ ಮರುಳುತ್ತಿದ್ದಾಳೆ. ದಾರಿಯಲ್ಲಿ ಕೆಲವು ಪುಂಡ



ಹುಡುಗರು ಆಕೆಯನ್ನು ಚುಡಾಯಿಸಿದ್ದಾರೆ. ಗಂಡನಿಗೆ ರೋಷಬಂದು ಆತ ಅವರನ್ನು ಚೆನ್ನಾಗಿ ಬೈದು- ಅಂದು ಮಾಡಿದ್ದಾನೆ. ಅವರೆಲ್ಲ ಗೊಣಗುತ್ತಾ ಹೊರಟು ಹೋದರು. ಇದು ಇಲ್ಲಿಗೇ ಮುಗಿಯಿತೆಂದುಕೊಂಡರು, ಗಂಡ - ಹೆಂಡತಿ. ಆದರೆ ಮುಂದೆ ಆದದ್ದೇ ಬೇರೆ.

ಮಾರನೆಯ ಸಂಜೆಗೇ ನಾಟಕ. ಎಲ್ಲವೂ ಸಿದ್ಧವಾಗಿದೆ. ಕಲಾವತಿಯ ಗಂಡನೇ ಗೇಟಿನ ಬಳಿ ಕೌಂಟರಿನಲ್ಲಿ ಕೂತು ಟಿಕೆಟ್ ಮಾರಾಟ ನೋಡಿಕೊಳ್ಳುತ್ತಿದ್ದಾರೆ. ಆಗ ಯುವಕರ ಪಟಾಲಂ ಒಂದು ಹಠಾತ್ತನೆ ಥಿಯೇಟರಿಗೆ ನುಗ್ಗಿದೆ. ಕೌಂಟರಿನಿಂದ ಸೀತಾರಾಮುವನ್ನು ಹೊರಗೆಳೆದುಕೊಂಡು ಬಂದು ತಲಾತಟ್ಟಿ ಏಟು ಹಾಕಲಾರಂಭಿಸಿದ್ದಾರೆ. ನಾಟಕದವರೆಲ್ಲ ತಮ್ಮ ಕೆಲಸವನ್ನು ಬಿಟ್ಟಲ್ಲೇ ಬಿಟ್ಟು ಅಲ್ಲಿಗೆ ಓಡಿದರು. ಕೆಲವರು ಓಡಿಬಂದು ಗ್ರೀನ್‌ರೂಂನಲ್ಲಿ ನನಗೆ ಸುದ್ದಿ ಮುಟ್ಟಿಸಿದರು. ನಾನು ಬಿದ್ದೆನೋ, ಕೆಟ್ಟೆನೋ ಎಂದು ಓಡಿ ಹೋದೆ. ಥಿಯೇಟರ್ ಸುತ್ತಲೂ ಮಳೆ ನೀರು ಸರಾಗವಾಗಿ ಹರಿದು ಹೋಗಲು ಕಾಲುವೆಯಂತೆ ತೋಡಿರುತ್ತಿದ್ದ ಹಳ್ಳವನ್ನೂ ಲೆಕ್ಕಿಸದೆ ದಾಟಿಕೊಂಡು ದೌಡಾಯಿಸಿದೆ. ಅಲ್ಲಿ ಒಂದೇ ಕೂಗಾಟ- ಗಲಾಟೆ ನಡೆದಿದೆ. ಸೀತಾರಾಮುವನ್ನು ನಡುವೆ ಸಿಕ್ಕಿಸಿಕೊಂಡು ಸುತ್ತಲೂ ಸೇರಿಕೊಂಡ ಹುಡುಗರು ಆತನನ್ನು ಸಿಕ್ಕಾಪಟ್ಟೆ ಚಚ್ಚುತ್ತಿದ್ದಾರೆ. ಅವರನ್ನು ಬಿಡಿಸಿಕೊಳ್ಳಲು ಕೆಲವರು ಪ್ರಯತ್ನ ಪಟ್ಟಿದ್ದಾರೆ. ಆದರೆ ಆ ಪುಂಡರ ಮುಂದೆ ಇವರ ಆಟ ಏನೂ ನಡೆದಿಲ್ಲ. ತಾವೂ ಒಂದಿಷ್ಟು ಪೆಟ್ಟು ತಿಂದು ಹಿಂದೆ ಸರಿದಿದ್ದಾರೆ. ಮತ್ತೆ ಮತ್ತೆ ಮುಂದು ಹೋಗುತ್ತಿದ್ದಾರೆ. ಉಳಿದವರಿಗಂತೂ ದಿಗ್ಭ್ರಮೆ, ಹೆದರಿಕೆ. ಮೂಕ ಪ್ರೇಕ್ಷಕರಾಗಿದ್ದಾರವರು. ಈ ನೋಟ ನೋಡಿದೊಡನೆಯೇ ನನಗೆ ತಡೆಯಲಾರದಷ್ಟು ಸಿಟ್ಟು ಬಂತು. ಆವೇಶ - ಆಕ್ರೋಶ ಒಟ್ಟಾಯಿತು. ನೆಟ್ಟನೆ ಮಧ್ಯಕ್ಕೆ ನುಗ್ಗಿ ಒಬ್ಬೊಬ್ಬರನ್ನೂ ಷರಟಿನ ಕತ್ತಿನ ಪಟ್ಟಿ ಹಿಡಿದೋ, ಜುಟ್ಟು ಹಿಡಿದೋ, ಎಳೆದೆಳೆದು ಪಕ್ಕಕ್ಕೆ - ಹಿಂದಕ್ಕೆ ತಳ್ಳಿಬಿಟ್ಟೆ. ಸೀತಾರಾಮು ಹೊರಗೆ ತೂರಿಬರಲು ದಾರಿ ಮಾಡಿಕೊಟ್ಟೆ. ಆತ ಹಣ್ಣುಗಾಯಿ- ನೀರುಗಾಯಿ ಆಗಿದ್ದಾರೆ. ಹಲ್ಲಿನಿಂದ ರಕ್ತ ತೊಟ್ಟಿಕ್ಕುತ್ತಿದೆ. ಗಲ್ಲ ಊದಿಬಿಟ್ಟಿದೆ. ಅಷ್ಟು ಹೊತ್ತಿಗೆ ನಮ್ಮ ಕಡೆ ಇನ್ನೂ ಹಲವರು ಧೈರ್ಯಶಾಲಿಗಳು ಬಂದರು. ಆ ಪಟಾಲಂ ಹುಡುಗರನ್ನು ವಿಚಾರಿಸಿಕೊಳ್ಳತೊಡಗಿದರು. ಕೆಲವರು ಸೀತಾರಾಮುವಿನ ಶುಶ್ರೂಷೆಗೆ ನಿಂತರು.

ನಾನೋ ಕೋಪದಿಂದ ಬುಸುಗುಡುತ್ತಿದ್ದೆ. ಆ ಹುಡುಗರೆಲ್ಲ ನನ್ನ ಅವತಾರ ನೋಡಿ ದಿಗ್ಮೂಢರಾಗಿದ್ದರು. ಹೀಗಾಗಿ ಯಾರೂ ನನ್ನ ಮೇಲೆ ತಿರುಗಿ ಬೀಳಲಿಲ್ಲ. ಕೈಯೆತ್ತಲೂ ಇಲ್ಲ. ಉದ್ವಿಗ್ನರಾಗಿ ನಿಂತುಕೊಂಡರು. ನಾನು ಏರು ದನಿಯಲ್ಲಿ "ಏನಪ್ಪ, ನಿಮಗೆ ಬುದ್ಧಿ ಇಲ್ಲವೇ? ನಾಚಿಕೆ ಇಲ್ಲವೇ? ಎಲ್ಲರೂ ಸೇರಿ ಒಬ್ಬನನ್ನು ಹೊಡೀತಿದ್ದೀರಲ್ಲ? ಇದು ತಪ್ಪಲ್ಲವೇ? ಏನಾದರೂ ವೈಮನಸ್ಯ ಇದ್ದರೆ ಬಂದು ನಿಧಾನವಾಗಿ ಕೂತು, ಮಾತಾಡಿ

ಬಗೆಹರಿಸಿಕೊಳ್ಳಬೇಡವೇ? ಅದು ಬಿಟ್ಟು ಕಾಡು ಮೃಗಗಳ ತರಹ ಆಡುತ್ತಿದ್ದೀರಲ್ಲ'' ಎಂದೆ. ಅವರಿಗೆ ಸಮಾಧಾನವಾಗಲಿಲ್ಲ. ಒಬ್ಬೊಬ್ಬರು ಒಂದೊಂದು ರೀತಿ ಜೋರಾಗಿ ಹಲುಬ ತೊಡಗಿದರು. ಎಲ್ಲರಿಗೂ ಚಿಕ್ಕ ವಯಸ್ಸು, ಸಾಕಷ್ಟು ದೇಹ ಬಲ. ಯಾವುದೇ ವಿವೇಕ, ವಿವೇಚನೆ ಇದ್ದವರಲ್ಲ. ಅವರಲ್ಲಿ ಬಹುತೇಕ ಮಂದಿ ಅಶಿಕ್ಷಿತರ ತರಹ ಇದ್ದಾರೆ. ಒಳ್ಳೇ ಮಾತು, ಬುದ್ದಿವಾದ ಅವರ ಕಿವಿಗೆ - ಮನಸ್ಸಿಗೆ- ಹೃದಯಕ್ಕೆ ತಟ್ಟುವ ಹಾಗಿರಲಿಲ್ಲ. ಏನೋ ಅಸಂಬದ್ಧ ಮಾತುಗಳು, ಅವಾಚ್ಯ ಶಬ್ದಗಳು. ನನಗೆ ತುಂಬಾ ಬೇಸರವಾಯಿತು. ಇವರನ್ನು ಹೀಗೇ ಬಿಡಬಾರದೆನಿಸಿತು.

ಒಂದಿಬ್ಬರು ಹುಡುಗರ ಕುತ್ತಿಗೆ ಪಟ್ಟಿಗೆ ಕೈ ಹಾಕಿ ಮುಂದೆಳೆದುಕೊಂಡು ಅವರನ್ನೇ ದುರುಗಟ್ಟಿ ನೋಡುತ್ತಾ 'ಒಳ್ಳೆ ಮಾತಿನಲ್ಲಿ ಇಲ್ಲಿಂದ ಹೊರಡ್ತೀರೋ ಇಲ್ಲವೋ' ಎಂದು ಗದರಿಸಿದೆ, ಅಬ್ಬರಿಸಿದೆ. ಆಗ ಅವರಿಗೆ 'ಓಹೋ! ಈ ಯಮ್ಮ ಬಡಪಟ್ಟಿಗೆ ಜಗ್ಗುವವಳಲ್ಲ. ನಮ್ಮನ್ನು ಸುಮ್ಮನೆ ಬಿಡುವವಳಲ್ಲ' ಎಂದರ್ಥವಾಗಿರಬೇಕು. 'ನಮ್ಮ ಹಗೆ ಕಟ್ಕೊಂಡು ಅದು ಹೇಗೆ ಈ ಊರಲ್ಲಿ ನಾಟಕ ಆಡುತ್ತೀರೋ ನೋಡ್ತೀವಿ' ಎಂದು ಎಗರಾಡುತ್ತಾ, ಗೊಣಗುತ್ತಾ ಗುರುಗುಡುತ್ತಾ ಹೊರಹೊರಟರು. ನಾನೂ "ಅಯ್ಯೋ ಹೋಗ್ರಯ್ಯ, ನಮಗೆ ಇಲ್ಲೇ ನಾಟಕ ಆಡಬೇಕೆಂದೇನಿಲ್ಲ. ನಮಗೆ ಮರ್ಯಾದೆಯೇ ಮುಖ್ಯ. ನೀವು ಇಷ್ಟೊಂದು ಅಧ್ವಾನವಾಗಿ ನಡಕೊಂಡ ಮೇಲೆ ನಮಗಿನ್ನೇನು ಕೆಲಸ? ಈ ಬೆದರಿಕೆ -ಹೆದರಿಕೆಗೆಲ್ಲಾ ನಾವು ಜಗ್ಗೋಲ್ಲ. ನಾವೂ ಹತ್ತಾರು ಊರು ಸುತ್ತಿ, ಹಲವಾರು ಕೆರೆ ನೀರು ಕುಡಿದಿದ್ದೀವಿ. ನಿಮ್ಮಂತೋರನ್ನ ನಾವು ಎಲ್ಲೂ ನೋಡಿಲ್ಲ. ಇವತ್ತೇ, ಈಗಲೇ ನಾಟಕ ನಿಲ್ಲಿಸ್ತೇವೆ'' ಅಂತ ಅಬ್ಬರಿಸಿದೆ. ಇವತ್ತು ನಾಟಕ ಆಡೋಲ್ಲ, ಟಿಕೆಟ್ ದುಡ್ಡು ವಾಪಸ್ ಮಾಡಿಬಿಡಿ ಅಂತ ಮ್ಯಾನೇಜರಿಗೆ ಹೇಳಿದೆ. ಅಷ್ಟು ಹೊತ್ತಿಗೆ ಈ ರಗಳೆ- ರಂಪದ ಬಗ್ಗೆ ಕೇಳಿ ಒಳಬಂದಿದ್ದ ಊರ ಹಿರಿಯರನೇಕರು ಹಾಗೂ ಪ್ರೇಕ್ಷಕರಲ್ಲಿ ಹಲವರು ನನ್ನನ್ನು ಸಮಾಧಾನಗೊಳಿಸ ತೊಡಗಿದರು. ನನ್ನದು ಒಂದೇ ಮಾತು: "ಇಷ್ಟು ಅವಮಾನ, ರೌಡಿತನ ಆದ ಮೇಲೆ ನಾವೇಕೆ ಇಲ್ಲಿ ನಾಟಕ ಆಡಬೇಕು? ನಾವು ದುಡ್ಡಿಗಲ್ಲ, ಮರ್ಯಾದೆಗೆ ಬದುಕುವವರು. ಉಪವಾಸ ಇದ್ದರೂ ಸರಿ, ಇಂಥಾ ಊರಿನ ಸಹವಾಸವೇ ನಮಗೆ ಬೇಡ.'' ಅವರ ಪುಸಲಾವಣೆ ನಡೆದೇ ಇತ್ತು. "ಯಾರೋ ಒಂದಿಷ್ಟು ದಡ್ಡ, ಪಡ್ಡೆ ಹುಡುಗರು ಬುದ್ದಿ ಇಲ್ಲದೆ ಹೀಗೆ ಮಾಡಿದ್ದಾರೆ. ಹಾಗೆಂದಾಕ್ಷಣ ನೀವು ಇಡೀ ನಮ್ಮೂರವರ ಬಗ್ಗೆಯೇ ಕೆಟ್ಟಭಿಪ್ರಾಯ ತಾಳೋದು ಸರಿಯಲ್ಲ. ಇಷ್ಟು ದಿನದಿಂದ ಇಲ್ಲಿ ನಾಟಕ ಆಡ್ತಿದೀರಿ. ನೀವೇ ನೋಡಿದೀರಲ್ಲ. ಏನಾದರೂ ತರ್ಲೆ- ತಂಟೆ- ತಕರಾರು ನಡೆದಿತ್ತಾ? ಯಾವು- ಯಾವುದೋ ಊರಿಂದ, ಎಷ್ಟೆಷ್ಟೋ ದೂರದಿಂದ ನಡೆದುಕೊಂಡು, ಗಾಡಿ ಕಟ್ಟಿಸಿಕೊಂಡು, ಬಸ್ಸು ಹಿಡಿದು ನಾಟಕ ನೋಡುವ ಆಸೆಯಿಂದ ಬಂದು ಕೂತಿದ್ದಾರೆ. ಅವರಿಗೋಸ್ಕರನಾದ್ರೂ ನಾಟಕ ಆಡಿ.'' ನಾನು ದೃಢವಾಗಿ ಹೇಳಿದೆ. "ನೀವೆಲ್ಲ ಇಷ್ಟು ಹೇಳಿದ್ದರಿಂದ, ಜನಕ್ಕೆ ತೊಂದರೆ



ಆಗಬಾರದೂಂತ ಇವತ್ತು ನಾಟಕ ಆಡ್ತೀವಿ. ಆದರೆ ನಾಳೆನೇ ನಮ್ಮ ಕ್ಯಾಂಪ್ ಕ್ಲೋಸ್. ಇದು ಖಂಡಿತ'' ಅಂದಿನ ನಾಟಕ ಅಂತೂ ನಡೆಯಿತು. ಆದರೆ ರಾತ್ರಿಯೆಲ್ಲ ನನಗೆ ಆತಂಕ, ತಳಮಳ. ಸರಿ ರಾತ್ರಿ ಯಾರಾದರೂ ನುಗ್ಗಿ ಬಂದು ಗಲಭೆ ಎಬ್ಬಿಸಿದರೆ? ಎಂಬ ಭಯ. ಪ್ರಾಯದ ಹೆಣ್ಣುಮಕ್ಕಳ ಗತಿಯೇನು ಎಂಬ ಭೀತಿ. ಎಲ್ಲಾದರೂ ಗುಡಾರಕ್ಕೆ ಬೆಂಕಿ ಹಾಕಿ ಬಿಟ್ಟರೆ ಎಂಬ ಅಂಜಿಕೆ. ಹೀಗಾಗಿ ನಾಟಕದ ಗುಡಾರದ ಬಳಿಯೂ, ನಮ್ಮ ಬಿಡಾರದ ಬಳಿಯೂ ನಮಗೆಲ್ಲ ಇಡೀ ರಾತ್ರಿ ಜಾಗರಣೆ! ನನ್ನ ಜೊತೆಗೆ ಸರದಿ ಮೇಲೆ ಇನ್ನೂ ಕೆಲವರು ಕಣ್ಣುಜ್ಜುತ್ತಾ ಬಂದು ಕೂತರು. ಸದ್ಯ, ಏನೂ ಅಪಾಯವಾಗದೆ ರಾತ್ರಿ ಕಳೆದೆವು.

ಮಾರನೆ ಬೆಳಿಗ್ಗೆಯೇ ಊರ ಹಿರಿಯರನ್ನು, ಅಲ್ಲಿನ ಸರ್ಕಾರಿ ಅಧಿಕಾರಿಗಳನ್ನು, ಪೊಲೀಸರನ್ನು ಕರೆಸಿಕೊಂಡೆ. "ನೋಡಿ, ನಿಮ್ಮೂರಿನಲ್ಲಿ ಹೀಗೆ - ಹೀಗೆ ಆಯಿತು. ಇದು ನಮ್ಮ ಹೆಣ್ಣು ಮಗಳು, ಆಕೆಯ ಗಂಡ ಇವರಿಗೆ ಮಾತ್ರ ಆದ ಅವಮಾನವಲ್ಲ. ನಮ್ಮ ಕಂಪನಿಯವರಿಗೆಲ್ಲಾ, ಕಲಾವಿದರಿಗೆಲ್ಲಾ ಅಷ್ಟೇ ಏಕೆ, ಇಡೀ ಕಲಾಜಗತ್ತಿಗೆ ಆದ ಅವಮಾನ- ಕಲಾದೇವಿಗೆ ಆದ ಅಪಚಾರ ಅಂತ ನನ್ನ ಭಾವನೆ. ಯಾವ ಊರಿನವರಿಗಾದರೂ ಇದು ಮಾನ, ಮರ್ಯಾದೆ ತರುವ ವಿಚಾರವಲ್ಲ. ನಿಮಗೆ ಆಗೋದಾದರೆ ಆ ಹುಡುಗರಿಗೆಲ್ಲ ಬುದ್ಧಿ ಹೇಳಿ. ಮುಂದೆ ನಿಮ್ಮ ಊರಿಗೆ ಬರುವ ಯಾವುದೇ ಕಲಾವಿದರಿಗೂ ಇಂಥಾ ಅನ್ಯಾಯ, ನೋವು ಆಗದ ಹಾಗೆ ನೋಡಿಕೊಳ್ಳಿ. ಒಟ್ಟಿನಲ್ಲಿ ತುಂಬ ಕಹಿ ನೆನಪು ಹೊತ್ತು ಈ ಊರಿಂದಾಚೆಗೆ ಕಾಲ್ತೆಗೆಯುತ್ತಿದ್ದೇವೆ'' ಎಂದು ಕಣ್ತುಂಬಿ ಹೇಳಿದೆ. ಬಂದವರಿಗೆಲ್ಲ ಕಸಿವಿಸಿ, ಮುಜುಗರ. ಹುಡುಗರ ಪರವಾಗಿ ಮತ್ತೆ ಮತ್ತೆ ನಮ್ಮೆಲ್ಲರ ಕ್ಷಮೆ ಕೋರಿದರು. ಅವರನ್ನೆಲ್ಲ ತರಾಟೆಗೆ ತೆಗೆದುಕೊಳ್ಳುವುದಾಗಿಯೂ ಹೇಳಿದರು. ಈ ಕಹಿ ಪ್ರಸಂಗವನ್ನು ಮರೆತು, ಅವರನ್ನು ಮನ್ನಿಸಿ ಮತ್ತೆ ಒಂದೆರಡಾದರೂ ನಾಟಕ ಆಡುವಂತೆ ಕೇಳಿಕೊಂಡರು. ನಾನು ಮಾತ್ರ ಸುತರಾಂ ಒಪ್ಪಲಿಲ್ಲ. ಅವರ ಪ್ರೀತಿ, ವಿಶ್ವಾಸಕ್ಕೆ ನಮನ ಸಲ್ಲಿಸಿದೆ. ಮರುದಿನವೇ ಕ್ಯಾಂಪ್ ಮುಗಿಸಿ ಗಂಟು- ಮೂಟೆ ಕಟ್ಟಿಕೊಂಡು ಹೊರಟೆವು. ಊರಜನರೆಲ್ಲ ಬಂದು ಹೂಹಾರ ಹಾಕಿ ಹಣ್ಣು ಹಂಪಲು ಕೊಟ್ಟು ಬೀಳ್ಕೊಟ್ಟರು. ಅವರಿಗೂ ಮನಸ್ಸಿಗೆ ವ್ಯಥೆ. ಏನು ಮಾಡುವುದು?ಕೆಲವರ ಅವಿವೇಕದಿಂದ, ಅತಿರೇಕದಿಂದ ಅಚಾತುರ್ಯವೊಂದು ನಡೆದು ಹೋಗಿತ್ತು. ಹಾಲು ಒಡೆದು ಹುಳಿಯಾದ ಮೇಲೆ ಪಾಯಸ ಮಾಡುವುದಕ್ಕಾಗುತ್ತದೆಯೇ? ನನ್ನ ಕಲಾಜೀವನದಲ್ಲೇ ಇದೊಂದು ಕಹಿ ಅನುಭವ, ಕರಿಯ ಕಲೆ, ಕಪ್ಪು ಚುಕ್ಕೆ.

ಈ ಘಟನೆಯಿಂದ ನಮಗಾದದ್ದು ದೊಡ್ಡ ನಷ್ಟವೇ. ಒಬ್ಬ ಒಳ್ಳೆಯ, ನುರಿತ ನಟಿ ನಮ್ಮನ್ನು ಬಿಟ್ಟು ಹೊರಟು ಹೋದಳು. ಅಷ್ಟೇ ಅಲ್ಲ, ಆಕೆ ರಂಗಜೀವನದಿಂದಲೇ ನಿರ್ಗಮಿಸಿ ಬಿಟ್ಟಳು. ಕಲಾವತಿಯ ಗಂಡ ಸೀತಾರಾಮಯ್ಯ, ರಂಗದ ಮೇಲೆ ಆಕೆಯ ನಟನೆಯನ್ನು

ನೋಡಿಯೇ, ಅವಳ ಕಲಾಪ್ರತಿಭೆಗೆ ಮರುಳಾಗಿಯೇ ಅವಳ ಮೇಲೆ ಮೋಹವನ್ನು - ಒಲವನ್ನು ಬೆಳೆಸಿಕೊಂಡವರು, ಮೆಚ್ಚಿ, ಮದುವೆಯಾದವರು. ಕಣಗಾಲ್ ಪುಟ್ಟಣ್ಣನವರ ಚಲನಚಿತ್ರ 'ರಂಗನಾಯಕಿ'ಯ ನಾಯಕನ ಹಾಗೆ. ಆದರೆ, ಆತ ಮದುವೆಯಾದ ನಂತರವೂ ಮಡದಿ ನಾಟಕ ರಂಗದಲ್ಲೇ ಮುಂದುವರಿಯಲು ಪ್ರೋತ್ಸಾಹ ಕೊಟ್ಟರು. ತಮಗೆ ಕೈ ತುಂಬ ಸಂಬಳ ತರುವ ನೌಕರಿಗೂ ಆಸೆ ಪಡದೆ, ಆಕೆಗೋಸ್ಕರ ತಾವೂ ಕಂಪನಿ ಕೆಲಸವನ್ನೇ ಬದುಕಿನ ದಾರಿ ಮಾಡಿಕೊಂಡವರು. ಅದರಲ್ಲೇ ತೃಪ್ತಿಯನ್ನೂ ಕಂಡುಕೊಂಡವರು. ಆದರೆ ಈ ಕಹಿ ಪ್ರಸಂಗದಿಂದಾಗಿ ಆತ ತುಂಬಾ ನೊಂದುಕೊಂಡರು. ಕಲಾ ಜೀವನದ ಬಗ್ಗೆಯೇ ಅವರಿಗೆ ಜಿಗುಪ್ಸೆ ಮೂಡಿಬಿಟ್ಟಿತು. ತಮ್ಮ ಮಡದಿ ನಾಟಕರಂಗದಲ್ಲಿ ಮುಂದುವರಿಯುವುದು ಅವರಿಗೆ ಸ್ವಲ್ಪವೂ ಇಷ್ಟವಾಗಲಿಲ್ಲ. ನಾಟಕದ ಮಂದಿಯನ್ನು, ಅದೂ ಹೆಣ್ಣು ಮಕ್ಕಳನ್ನು ಜನ ಒಂದು ರೀತಿ ವಿಲಕ್ಷಣವಾಗಿ ನೋಡುತ್ತಾರೆ. ವಿಚಿತ್ರವಾಗಿ ನಡೆದುಕೊಳ್ಳುತ್ತಾರೆ. ಎಂದಿದ್ದರೂ ಇದೇ ಕಥೆ- ವ್ಯಥೆ ಎಂಬ ನಿರ್ಧಾರಕ್ಕೆ ಬಂದು ಬಿಟ್ಟರು. 'ರಂಗಭೂಮಿಯಿಂದಾಗಿ ತಮ್ಮ ಮತ್ತು ಪತ್ನಿಯ ಸುರಕ್ಷತೆಗೆ, ಹೆಸರಿಗೆ, ಕುಟುಂಬದ ಸೌಹಾರ್ದತೆಗೆ, ಮನಶ್ಶಾಂತಿಗೆ ಭಂಗ ಬರುವುದು ಬೇಡ' ಎಂದವರ ಕಟ್ಟುನಿಟ್ಟಾದ ತೀರ್ಮಾನ. ನನ್ನನ್ನು ಕಂಡರೆ ಗಂಡ- ಹೆಂಡತಿ ಇಬ್ಬರಿಗೂ ಮೊದಲಿಂದ ಬಹಳ ಗೌರವ. ಅಲ್ಲದೆ ಈ ಘಟನೆಯಲ್ಲಿ ನಾನು ಅವರಿಬ್ಬರ ಗೌರವ - ಘನತೆಯನ್ನು ಎತ್ತಿ ಹಿಡಿದೆ, ನಾಟಕಗಳನ್ನೂ ನಿಲ್ಲಿಸಿ ಹಿರಿಯೂರಿನಿಂದಲೇ ಹೊರಟು ಬಂದೆ, ಎಂಬ ಕಾರಣಕ್ಕೆ ಅದೀಗ ಇಮ್ಮಡಿಸಿತ್ತು.

ಒಂದು ಬೆಳಿಗ್ಗೆ ನನ್ನ ಬಳಿ ಬಂದರು. ಹಣ್ಣು- ಹೂವು ಕೊಟ್ಟರು. ನಮಸ್ಕಾರ ಮಾಡಿದರು. ತಮ್ಮ ನಿರ್ಧಾರವನ್ನು ಕಣ್ಣೀರು ಹಾಕುತ್ತಲೇ ತಿಳಿಸಿದರು. ನನಗೋ ಏನಾದರೂ ಬದಲು ಹೇಳುವುದು ಸರಿತೋಚಲಿಲ್ಲ. ಏನೋ ಸಬೂಬು ಹೇಳಿ, ಒತ್ತಡ ಹೇರಿ ಆಕೆ ಕಂಪನಿಯಲ್ಲಿ ಮುಂದುವರಿಯುವಂತೆ ಮಾಡುವುದು ಬೇಕಿರಲಿಲ್ಲ. ಅದಕ್ಕೆ ನನ್ನಲ್ಲಿ ಸಾಕಷ್ಟು ಸಮರ್ಥನೆಯೂ ಇರಲಿಲ್ಲ. ಅವರಿಗೆ ಸಮಾಧಾನ ಹೇಳಿದೆ, ಶುಭ ಹಾರೈಸಿದೆ. ಅವರು ಹೊರಟಾಗ ನನ್ನ ಕಣ್ಣಂಚಿನಲ್ಲಿ ನೀರು ನಿಂತಿತ್ತು. ಮಗಳು- ಅಳಿಯನನ್ನು ಬೀಳ್ಕೊಡುವಾಗಿನ ಉತ್ಕಟಭಾವ, ವಿರಹ ವೇದನೆ ನನ್ನನ್ನು ಕಾಡಿತ್ತು. ಏನೇ ಇರಲಿ, ನಿಮಗೆ ಒಳ್ಳೆಯದಾಗಲಿ. ನೆಮ್ಮದಿ- ಶಾಂತಿ ಸಿಗಲಿ, ಮಕ್ಕಳ ಜೊತೆ ಹಾಯಾಗಿರಿ ಎಂದು ಹರಸುತ್ತಾ ಮಡಿಲು ತುಂಬಿ, ನನ್ನ ಕೈಲಾದ ಉಡುಗೊರೆ ಸಮೇತ ಕಳಿಸಿಕೊಟ್ಟೆ. ಆಕೆಯ ಬದಲಿಗೆ ಅಷ್ಟೇ ಒಳ್ಳೆಯ ನಟಿ ನಮಗೆ ದೊರೆಯಲು ಸಾಕಷ್ಟು ಸಮಯವೇ ಹಿಡಿಯಿತು.



ರಂಗಭೂಮಿಯೆಂಬುದು ಚಿರಂತನ ಚೇತನ, ನಿರಂತರ ಚಲನಶೀಲ. ಸುದೀರ್ಘ ರಿಲೇರೇಸ್‌ನ ಹಾಗೆ ಅದು. ಯಾರೋ ಓಟ ಆರಂಭಿಸಿರುತ್ತಾರೆ. ನಡುವೆ ಮತ್ತಾರೋ ಬಂದು ಅವರಿಗೆ ಬಿಡುವು ಕೊಟ್ಟು, ತಾವು ಓಡಲಾರಂಭಿಸುತ್ತಾರೆ. ಮುಂದೆ ಅವರದೂ ಅದೇ ಪಾಡು. ಮತ್ತಿನ್ನಾರೋ ಓಟ ಮುಂದುವರಿಸುತ್ತಾರೆ. ಕೊನೆ ಮುಟ್ಟುತ್ತಾರೆ. ಆದರೆ ಪಂದ್ಯಾಟ ಮುಗಿದು, ಗೆಲುವು ದೊರೆತಾಗ ಎಲ್ಲರಿಗೂ ಹಿಗ್ಗು. ನಲಿವಿನಲ್ಲಿ ಎಲ್ಲರಿಗೂ ಪಾಲು. ಸೋತಾಗಲೂ ಹಾಗೇ, ವಿಷಾದದಲ್ಲಿ ಸಮಪಾಲು. ಇಲ್ಲಿ ಓಡಿದ ಅನುಭವವೇ ಮುಂದಿನ ಆಟೋಟದ ಗೆಲುವಿಗೆ ಬುನಾದಿ, ಸಿದ್ಧತೆ. ಒಟ್ಟಿನಲ್ಲಿ ಅದೊಂದು ಒಕ್ಕೂಟದ ಪ್ರಯತ್ನ, ಒಗ್ಗಟ್ಟಿನ ಪ್ರದರ್ಶನ, ಒಟ್ಟಾರೆ ಪಡೆದ ಫಲಿತಾಂಶ.

ರಂಗಭೂಮಿಯೂ ಹೀಗೇ: ಯಾರೂ ಶಾಶ್ವತವಲ್ಲ, ಯಾರೂ ಅನಿವಾರ್ಯವಲ್ಲ. ಆದರೂ ತಮ್ಮ ಪಾಲಿನ ಕೆಲಸವನ್ನು ಎಲ್ಲರೂ ಸಾಕಷ್ಟು ಸಮರ್ಥವಾಗಿಯೇ, ಮನವಿಟ್ಟೇ ಮಾಡಿರುತ್ತಾರೆ. ಏಕೆಂದರೆ ಅವರಿಗೆ ಒಟ್ಟು ಯತ್ನದಲ್ಲಿ- ಯಶಸ್ಸಿನಲ್ಲಿ ತಮಗೂ ಪಾಲಿದೆ ಎಂಬ ಅರಿವು ಇದ್ದೇ ಇರುತ್ತದೆ. ತಮ್ಮ ಮುಂಚೆಯೂ ಅಂಥದೇ ಜನ ಬೇರೆ ಇದ್ದರು. ತಮ್ಮ ನಂತರವೂ ಬೇರೆ ಯಾರೋ ಬರುತ್ತಾರೆ. ಆದರೆ ರಂಗದ ಮೇಲಿನ ಆಟ ಎಂದೆಂದಿಗೂ ನಿಲ್ಲದು ಎಂಬ ಸತ್ಯ ಅವರಿಗೆ ಮನವರಿಕೆಯಾಗಿರುತ್ತದೆ. ಎಷ್ಟೇ ಆದರೂ ಒಳ್ಳೆಯ, ನಿಷ್ಠಾವಂತ, ಪ್ರತಿಭಾಪೂರ್ಣ ಕಲಾವಿದರು ಯಾವುದೋ ಇಂತಹ ದುರ್ಘಟನೆಗಳಿಂದಾಗಿ, ನೋವು- ಅನ್ಯಾಯಪಟ್ಟು, ರಂಗಭೂಮಿಯನ್ನು ಬಿಟ್ಟು ಹೊರಟುಹೋದರೆ ಅದು ಕಲಾಜಗತ್ತಿಗೇ ಆದ ನಷ್ಟವೆಂದೇ ಬಗೆಯಬೇಕಾಗುತ್ತದೆ. ಅದಕ್ಕಾಗಿ ಸಂಕಟವೂ ಆಗುತ್ತದೆ.

•